KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಮಾರ್ಚ್ ೪, ೨೦೧೦ (ಫಾಲ್ಗುಣ ೧೩, ಶಕ ವರ್ಷ ೧೯೩೧) | ಸಂಚಿಕೆ ೯ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಹೆಚ್.ಡಿ. ಆನಂದಕುಮಾರ್, ಸಹಾಯಕ ಪೊಲೀಸ್ ಆಯುಕ್ತರು, ಬೆಂಗಳೂರು ರವರ ವಿರುದ್ಧ ನಡೆದ ಲೋಕಾಯುಕ್ತ ದಾಳಿಗೆ ಸಂಬಂಧಿಸಿದಂತೆ ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಛೇರಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ (ಜಿ)ಸಿಟಿ/ಕ್ರೈಂ 76/2009 ದಿನಾಂಕ 09–12–2009.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ದಿನಾಂಕ 07–12–2009 ರಂದು ಈ ಪ್ರಕರಣದ ಫಿರ್ಯಾದುದಾರರಾದ ಶ್ರೀ ನಾರಾಯಣಸ್ವಾಮಿ, ಬಿಲ್ಲಮಾರನಹಳ್ಳಿ, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ರವರು ಬೆಂಗಳೂರು ನಗರ ಲೋಕಾಯುಕ್ತ, ಪೊಲೀಸ್ ಠಾಣೆಗೆ ಹಾಜರಾಗಿ ನೀಡಿದ ದೂರಿನ ಸಾರಾಂಶವೇನೆಂದರೆ, ಫಿರ್ಯಾದುದಾರರು ಅವಿಭಕ್ತ ಕುಟುಂಬಕ್ಕೆ ಸೇರಿದವರಾಗಿದ್ದು, ಜಂಟಿ ಖಾತೆಯಲ್ಲಿ ಬಿಲ್ಲಮಾರನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.39/1, 39/2, ರಲ್ಲಿ ಇದ್ದ ಜಮೀನನ್ನು ಶ್ರೀ ಅತುಲ್ ಕುಮಾರ್ ಎಂಬುವವರಿಗೆ ಅಗ್ರಿಮೆಂಟ್ ಮಾಡಿಕೊಟ್ಟು ಮುಂಗಡವಾಗಿ ರೂ. 1,00,000/– ಗಳನ್ನು ಪಡೆದುಕೊಂಡಿದ್ದು ಅವರಿಗೆ ಯಾವುದೇ ಕ್ರಯಪತ್ರವನ್ನು ಮಾಡಿಸಿಕೊಟ್ಟಿರುವುದಿಲ್ಲ. ದಿನಾಂಕ 20–08–2009 ರಂದು ಶ್ರೀ ಅತುಲ್ ಕುಮಾರ್‌ರವರು ಎಲ್ಲರ ಸಹಿಗಳನ್ನು ನಕಲಿ ಮಾಡಿಕೊಂಡು ಜಿಪಿಎ ಮುಖಾಂತರ ಜಮೀನು ತಮ್ಮ ಹೆಸರಿಗೆ ಬರುವಂತೆ ಮಾಡಿಕೊಂಡು ತಮ್ಮ ಪತ್ನಿ ಶ್ರೀಮತಿ ಭವಿತರವರಿಗೆ ಕ್ರಯ ಮಾಡಿ, ಖಾತೆ ಬದಲಾವಣೆ ಮಾಡಿಕೊಳ್ಳುವಾಗ ಅವರು ಫಿರ್ಯಾದುದಾರರಿಗೆ ತಿಳಿಸಿದ್ದು, ಫಿರ್ಯಾದುದಾರರು ಬೆಂಗಳೂರು ಉತ್ತರ ತಾಲ್ಲೂಕ್ ಯಲಹಂಕ ಸಬ್‌ರಿಜಿಸ್ಟ್ರಾರ್ ಕಛೇರಿಯಲ್ಲಿ ಪ್ರಕರಣವನ್ನು ದಾಖಲಿಸಿದ್ದು. ಈ ಬಗ್ಗೆ ಮೊಕದ್ದಮೆ ನಡೆದು ಅವರಿಗೆ ಖಾತೆ ಮಾಡದಂತೆ ಆದೇಶವಾಗಿತ್ತು. ಈ ಜಮೀನಿನ ಬಗ್ಗೆ ಅಡಿಷನಲ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ಕೋರ್ಟಿನಲ್ಲಿ ಮೊಕದ್ದಮೆಯನ್ನು ಪುರಸ್ಕರಿಸಿ, ಚಿಕ್ಕಜಾಲ ಪೊಲೀಸ್ ಠಾಣೆಗೆ ವರದಿ ಸಲ್ಲಿಸುವಂತೆ ಆದೇಶವಾಗಿದ್ದು. ಈ ಬಗ್ಗೆ ಫಿರ್ಯಾದುದಾರರು ಮಾರ್ಚ್ ತಿಂಗಳಲ್ಲಿ ಚಿಕ್ಕಜಾಲ ಪೊಲೀಸ್ ಠಾಣೆಗೆ ಹೋಗಿ ವಿಚಾರಿಸಿದಾಗ ದೇವನಹಳ್ಳಿ ಎ.ಸಿ.ಪಿ. ರವರನ್ನು ಭೇಟಿ ಮಾಡಲು ತಿಳಿಸಿದರು. ಅದರಂತೆ, ಫಿರ್ಯಾದುದಾರರು ಎ.ಸಿ.ಪಿ. ದೇವನಹಳ್ಳಿ ರವರನ್ನು ಭೇಟಿ ಮಾಡಿ ತಮ್ಮ ಕೆಲಸದ ಬಗ್ಗೆ ಕೇಳಿದಾಗ, ಆರೋಪಿತರುಗಳಿಗೆ ನೋಟೀಸ್‌ಗಳನ್ನು ಜಾರಿ ಮಾಡಿಸಿಕೊಟ್ಟು, ನನಗೆ ಇನ್ಸ್‌ಪೆಕ್ಟರ್‌ರವರಿಗೂ ಚೆನ್ನಾಗಿ ಇಲ್ಲ, ಅವರು ವರ್ಗಾವಣೆ ಆದ ಮೇಲೆ ಒಬ್ಬನೇ ನಿಮ್ಮ ಕೆಲಸವನ್ನು ಮಾಡಿಕೊಡುತ್ತೇನೆ ಎಂದು ಹೇಳಿದ್ದು. ಪುನ: ಫಿರ್ಯಾದುದಾರರು ದಿನಾಂಕ 03–12–2009 ರಂದು ಎ.ಸಿ.ಪಿ. ದೇವನಹಳ್ಳಿರವರನ್ನು ಭೇಟಿ ಮಾಡಿದಾಗ ಆರೋಪಿತರು ಲಂಚದ ಹಣ ರೂ. 5 ಲಕ್ಷ ಹಾಗೂ ಜಮೀನು ಮಾರಿದ ಹಣದಲ್ಲಿ ಭಾಗ ಕೊಡಬೇಕೆಂದು ಒತ್ತಾಯಿಸಿರುತ್ತಾರೆ. ಫಿರ್ಯಾದುದಾರರಿಗೆ ಆರೋಪಿತರು ಕೇಳಿದಂತೆ ಲಂಚದ ಹಣವನ್ನು ಕೊಡಲು ಇಷ್ಟವಿಲ್ಲದ್ದರಿಂದ ಆರೋಪಿತರ ವಿರುದ್ಧ ಕಾನೂನು ರೀತ್ಯ ಕ್ರಮವನ್ನು ಕೈಗೊಳ್ಳಬೇಕೆಂದು ಕೋರಿರುತ್ತಾರೆ.

ಮೇಲ್ಕಂಡ ದೂರಿನ ಹಿನ್ನೆಲೆಯಲ್ಲಿ ಶ್ರೀ ಕೆ. ರವಿಶಂಕರ್ ಪೊಲೀಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ಪೊಲೀಸ್ ಠಾಣೆ ರವರು ಆರೋಪಿ ಶ್ರೀ ಹೆಚ್.ಡಿ. ಆನಂದಕುಮಾರ್ ಎ.ಸಿ.ಪಿ. ದೇವನಹಳ್ಳಿರವರ ವಿರುದ್ಧ ಲಂಚ ನಿರೋಧ ಕಾಯ್ದೆ, 1988 ರ ಕಲಂ 7, 13(1)ಡಿ ಸಹವಾಚನ ಕಲಂ 13(2) ರ ರೀತ್ಯ

ದಿನಾಂಕ 07-12-2009 ರಂದು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ 76/2009 ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ಔಚಿತ್ಯ ಪೂರ್ವ ಕಾರ್ಯಗಳನ್ನು ನೆರವೇರಿಸಿದ ನಂತರ, ತನಿಖಾಧಿಕಾರಿಯು ತಮ್ಮ ಸಿಬ್ಬಂದಿ ಹಾಗೂ ಪಂಚ ಸಾಕ್ಷಿಗಳ ಸಮೇತ ದಿನಾಂಕ 07-12-2009 ರಂದು ಬೀಸಿದ ಲಂಚದ ಬಲೆಯು ಯಶಸ್ವಿಯಾಗಿದ್ದು, ಆರೋಪಿ ಶ್ರೀ ಹೆಚ್.ಡಿ. ಆನಂದಕುಮಾರ್, ಸಹಾಯಕ ಪೊಲೀಸ್ ಆಯುಕ್ತರು, ದೇವನಹಳ್ಳಿ, ಬೆಂಗಳೂರು ರವರು ತಾವು ಒತ್ತಾಯ ಮಾಡಿದ ಲಂಚದ ಹಣ ರೂ. 1,00,000/- ಗಳನ್ನು ಫಿರ್ಯಾದುದಾರರಿಂದ ಅವರ ಕಛೇರಿಯಲ್ಲಿ ಕುಳಿತಿದ್ದ ವಯಸ್ಸಾದ ಮತ್ತೋರ್ವ ವ್ಯಕ್ತಿ ಶ್ರೀ ರಾಘವಪ್ಪ ರವರಿಗೆ ನೀಡಲು ತಿಳಿಸಿದ್ದು, ಅದರಂತೆ ಫಿರ್ಯಾದುದಾರರು ಸದರಿ ವ್ಯಕ್ತಿಗೆ ಲಂಚದ ಹಣವನ್ನು ನೀಡಿರುತ್ತಾರೆ. ಆರೋಪಿತರ ಕಛೇರಿಯಲ್ಲಿದ್ದ ಶ್ರೀ ರಾಘವಪ್ಪ ರವರು ಫಿರ್ಯಾದುದಾರರಿಂದ ಸ್ವೀಕರಿಸಿದ ಲಂಚದ ಹಣ ರೂ. 1,00,000/- ಗಳನ್ನು ತನ್ನ ಕೈಯಲ್ಲಿದ್ದ ದಿನಪತ್ರಿಕೆಯ ಒಳಗಿದ್ದ ಉಪ್ಪಾರಪೇಟೆ ಪೊಲೀಸ್ ಠಾಣೆಯ ಮೊ. ಸಂಖ್ಯೆ 633/2009 ಕೇಸಿನ ನಕಲು ಎಫ್.ಐ.ಆರ್. ನಲ್ಲಿ ಸುತ್ತಿಟ್ಟಿದ್ದು, ಅದನ್ನು ಯಥಾರೀತಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಶ್ರೀ ರಾಘವಪ್ಪ ರವರ ಎರಡು ಕೈ ಬೆರಳುಗಳನ್ನು ಹಾಗೂ ಲಂಚದ ಹಣವನ್ನಿಟ್ಟಿದ್ದ ದಿನಪತ್ರಿಕೆಯ ಒಳಗೆ ನಕಲು ಎಫ್.ಐ.ಆರ್. ನಲ್ಲಿ ಸುತ್ತಿಟ್ಟುಕೊಂಡಿದ್ದ ಭಾಗದ ಮೇಲ್ಭಾಗವನ್ನು ಹತ್ತಿ ಬಟ್ಟೆಯಿಂದ ಒರೆಸಿ ಸದರಿ ಬಟ್ಟೆಯಲ್ಲಿ ಸೋಡಿಯಂ ಕಾರ್ಬೋನೇಟ್ ಮಿಶ್ರಣದ ದ್ರಾವಣದಲ್ಲಿ ಪ್ರತ್ಯೇಕವಾಗಿ ಅದ್ದಿಸಿ ತೊಳೆಸಿದಾಗ, ಬಣ್ಣರಹಿತವಾದ ದ್ರಾವಣಗಳು ತಿಳಿ ಗುಲಾಬಿ ಬಣ್ಣಕ್ಕೆ ತಿರುಗುವುದರ ಮೂಲಕ ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿರುತ್ತವೆ. ಆರೋಪಿತರನ್ನು ದಿನಾಂಕ 07-12-2009 ರಂದು ದಸ್ತಗಿರಿ ಮಾಡಿ, ಘನ ನ್ಯಾಯಾಧೀಶರ ಮುಂದೆ ಹಾಜರುಪಡಿಸಲಾಗಿದ್ದು, ನ್ಯಾಯಾಧೀಶರ ಆದೇಶದಂತೆ ಆರೋಪಿತರನ್ನು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಲಾಗಿದೆ.

ಮುಂದುವರೆದು, ಶ್ರೀ ಹೆಚ್.ಡಿ. ಆನಂದಕುಮಾರ್, ಸಹಾಯಕ ಪೊಲೀಸ್ ಆಯುಕ್ತರು, ದೇವನಹಳ್ಳಿ ಇವರ ಮೇಲಿನ ಭ್ರಷ್ಟಾಚಾರದ ಆಪಾದನೆಗಳು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಆರೋಪಿತರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಅವರನ್ನು ಕೂಡಲೆ ಸೇವೆಯಿಂದ ಅಮಾನತ್ತುಗೊಳಿಸಿ ಲೀನ್ ಅನ್ನು ಬೇರೆ ಕಡೆಗೆ ವರ್ಗಾಯಿಸುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 614 ಪೊಸಿಪ 2009, ಬೆಂಗಳೂರು, ದಿನಾಂಕ: 8ನೇ ಜನವರಿ 2010.**

ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಹೆಚ್.ಡಿ. ಆನಂದಕುಮಾರ್, ಸಹಾಯಕ ಪೊಲೀಸ್ ಆಯುಕ್ತರು, ದೇವನಹಳ್ಳಿ ರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿರಿಸಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(2) ರನ್ವಯ ದಿನಾಂಕ 07-12-2009 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಹೆಚ್.ಡಿ. ಆನಂದಕುಮಾರ್, ಸಹಾಯಕ ಪೊಲೀಸ್ ಆಯುಕ್ತರು, ರವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ನೀಡತಕ್ಕದ್ದು.

ಅಮಾನತ್ತಿನ ಅವಧಿಯಲ್ಲಿ ಶ್ರೀ ಹೆಚ್.ಡಿ. ಆನಂದಕುಮಾರ್, ಸಹಾಯಕ ಪೊಲೀಸ್ ಆಯುಕ್ತರು, ರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.105

**(ಟಿ.ಎನ್. ರವಿಪ್ರಕಾಶ್)**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎನ್. ತೇಜಸ್‌ಕುಮಾರ್ ಉಪನ್ಯಾಸಕರು ಪದವಿ ಪೂರ್ವ ಶಿಕ್ಷಣ ಇಲಾಖೆ (ಹಾಲಿ ನಿಯೋಜನೆ ಮೇಲೆ ವಿಶೇಷಾಧಿಕಾರಿ, ಮುಖ್ಯಮಂತ್ರಿಯವರ ಸಚಿವಾಲಯ) ಇವರ ಸೇವೆಯನ್ನು ಕಂದಾಯ ಇಲಾಖೆಯ ತಹಸೀಲ್ದಾರ್ ಗ್ರೇಡ್ -2 ಹುದ್ದೆಗಳಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ :** 1) ಶ್ರೀ ಎನ್. ತೇಜಸ್‌ಕುಮಾರ್ ಉಪನ್ಯಾಸಕರು ಪದವಿ ಪೂರ್ವ ಶಿಕ್ಷಣ ಇಲಾಖೆ, ಪ್ರಸ್ತುತ ನಿಯೋಜನೆಯ ಮೇರೆಗೆ ಮಾನ್ಯ ಮುಖ್ಯಮಂತ್ರಿಯವರ ವಿಶೇಷಾಧಿಕಾರಿ ಇವರ ಮನವಿ ದಿನಾಂಕ 06-11-2009

2) ಶಿಕ್ಷಣ ಇಲಾಖೆಯ ಅನಧಿಕೃತ ಟಿಪ್ಪಣಿ ಸಂ: ಇಡಿ 127 ಡಿಜಿಡಿ 2009, ದಿನಾಂಕ : 28-10-2009

ಮೇಲೆ ಓದಲಾದ (1)ರ ದಿನಾಂಕ 06-11-2009 ರ ಮನವಿಯಲ್ಲಿ ಶ್ರೀ ಎನ್. ತೇಜಸ್‌ಕುಮಾರ್, ಉಪನ್ಯಾಸಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಪ್ರಸ್ತುತ ನಿಯೋಜನೆಯ ಮೇರೆಗೆ ಮಾನ್ಯ ಮುಖ್ಯಮಂತ್ರಿಯವರ ವಿಶೇಷಾಧಿಕಾರಿ ಇವರು, ಅವರ ಸೇವೆಯನ್ನು ಕಂದಾಯ ಇಲಾಖೆಯಲ್ಲಿ ವಿಲೀನಗೊಳಿಸಲು ವಿನಂತಿಸಿರುತ್ತಾರೆ ಮತ್ತು ಅವರು ಜೇಷ್ಠತೆಯನ್ನು ಬಿಟ್ಟುಕೊಡಲು ಒಪ್ಪಿರುತ್ತಾರೆ.

ಈ ಸಂಬಂಧ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಅಭಿಪ್ರಾಯ ಕೋರಲಾಗಿ ದಿನಾಂಕ 05-08-2009ರ ಟಿಪ್ಪಣಿಯಲ್ಲಿ, ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 16(a) (ii) ರನ್ವಯ ಸರ್ಕಾರದ ಒಂದು ಇಲಾಖೆಯಿಂದ ಇನ್ನೊಂದು ಇಲಾಖೆಗೆ ಸರ್ಕಾರಿ ನೌಕರರನ್ನು ಖಾಯಂ ಆಗಿ ವರ್ಗಾವಣೆ ಮೂಲಕ ನೇಮಕಾತಿ ಮಾಡಲು ಈ ಕೆಳಕಂಡ ಷರತ್ತುಗಳನ್ನು ಪೂರೈಸಬೇಕಾಗುತ್ತದೆ ಎಂದು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಅಭಿಪ್ರಾಯ ಪಟ್ಟಿರುತ್ತದೆ.

1) ಸಂಬಂಧ ಪಟ್ಟ ನೌಕರರು ಸಕ್ರಮವಾಗಿ ನೇಮಕಗೊಂಡಿರಬೇಕು ಹಾಗೂ ಅವರು ತಮ್ಮ ಮಾತೃ ಇಲಾಖೆಯಲ್ಲಿ ಪರಿವೀಕ್ಷಣಾ ಅವಧಿ / ಸ್ಥಾನಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರಬೇಕು ;
2) ಸಂಬಂಧಪಟ್ಟ ನೌಕರರು ಮಾತೃ ಇಲಾಖೆಯಲ್ಲಿ ಹೊಂದಿರುವ ಹುದ್ದೆಯ ವೇತನ ಶ್ರೇಣಿ ಮತ್ತು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಹುದ್ದೆಯ ವೇತನ ಶ್ರೇಣಿಗಳು ಸಮಾನ ವೇತನ ಶ್ರೇಣಿಗಳಾಗಿರಬೇಕು.
3) ವರ್ಗಾವಣೆ ಮುಖಾಂತರ ನೇಮಕಾತಿ ಹೊಂದುವ ನೌಕರರು ವರ್ಗಾವಣೆ ಮುಖಾಂತರ ನೇಮಕಾತಿ ಹೊಂದುವ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು ;
4) ಪ್ರಸ್ತಾಪಿತ ವರ್ಗಾವಣೆ ಮೂಲಕ ನೇಮಕಾತಿಯನ್ನು ನೌಕರರ ಮಾತೃ ಇಲಾಖೆ ಹಾಗೂ ಇವರನ್ನು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಇಲಾಖೆಗಳು ಒಪ್ಪಿರಬೇಕು;
5) ಪ್ರಸ್ತಾಪಿತ ವರ್ಗಾವಣೆ ಮೂಲಕ ನೇಮಕಾತಿಯನ್ನು ನೌಕರರ ಕೋರಿಕೆಯ ಮೇರೆಗೆ ಮಾಡಲು ಉದ್ದೇಶಿಸಿರುವುದರಿಂದ, ವರ್ಗಾವಣೆ ಮೂಲಕ ನೇಮಿಸಲಾಗುವ ಹುದ್ದೆಯಲ್ಲಿ ಈ ನೌಕರರ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು, 1957ರ ನಿಯಮ 6ರ ಮೊದಲನೇ ಪರಂತುಕದನುಸಾರ ನಿರ್ಧರಿಸಬೇಕು. ಈ ಬಗ್ಗೆ ನೌಕರರ ಒಪ್ಪಿಗೆಯನ್ನು ಬರವಣಿಗೆ ಮೂಲಕ ಪಡೆಯಬೇಕು ;
6) ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 16(a) (ii) ರಡಿ ಮಾಡುವ ವರ್ಗಾವಣೆ ಮೂಲಕ ನೇಮಕಾತಿಯನ್ನು ನೌಕರರ ಸೇವಾವಧಿಯಲ್ಲಿ ಒಮ್ಮೆ ಮಾತ್ರ ಮಾಡಬಹುದು;
7) ನೌಕರರು ವರ್ಗಾವಣೆ ಭತ್ಯೆ ಪಡೆಯಲು ಅರ್ಹರಿರುವುದಿಲ್ಲ ;
8) ಕೆ.ಸಿ.ಎಸ್ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 16(a) (ii) ರಡಿ ವರ್ಗಾವಣೆ ಮೂಲಕ ಮಾಡುವ ನೇಮಕಾತಿಗೆ ಸಂಬಂಧಿಸಿದ ಇಲಾಖಾ ಸಚಿವರ ಅನುಮೋದನೆ ಪಡೆಯುವುದು ಅವಶ್ಯಕ.

ಪ್ರಸ್ತಾವನೆಗೆ ಸಂಬಂಧಿಸಿದಂತೆ, ಶಿಕ್ಷಣ ಇಲಾಖೆಯ ಅಭಿಪ್ರಾಯ ಕೋರಲಾಗಿ, ಮೇಲೆ (2)ರಲ್ಲಿ ಓದಲಾದ ಶಿಕ್ಷಣ ಇಲಾಖೆಯ ಅನಧಿಕೃತ ಟಿಪ್ಪಣಿಯಲ್ಲಿ ಶ್ರೀ ಎನ್. ತೇಜಸ್‌ಕುಮಾರ್, ಉಪನ್ಯಾಸಕರು ಇವರು ನೇರ ನೇಮಕಾತಿ ಮೂಲಕ ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಉಪನ್ಯಾಸಕರಾಗಿ ನೇಮಕ ಹೊಂದಿದ್ದು, ಪರಿವೀಕ್ಷಣಾ ಅವಧಿ ತೃಪ್ತಿಕರವಾಗಿ ಪೂರೈಸಿರುತ್ತಾರೆ. ಸದರಿಯವರು ಉಪನ್ಯಾಸಕರ ಹುದ್ದೆಯಲ್ಲಿ ವೇತನ ಶ್ರೇಣಿ ರೂ. 11,400-21,600 ನ್ನು ಹೊಂದಿದ್ದು, ಗ್ರೂಪ್-ಬಿ ಹುದ್ದೆಯಾಗಿರುತ್ತದೆ. ಸದರಿ ಉಪನ್ಯಾಸಕರಿಗೆ ಯಾವುದೇ ಇಲಾಖಾ ಪರೀಕ್ಷೆ ಕಡ್ಡಾಯ ಇರುವುದಿಲ್ಲವೆಂದು, ಕನ್ನಡ ಭಾಷಾ ಪರೀಕ್ಷೆ ವಿನಾಯತಿ ಹೊಂದಿರುತ್ತಾರೆಂದು ಈ ಅಧಿಕಾರಿಯವರಿಗೆ ಪ್ರಸ್ತುತ ಪ್ರಸ್ತಾವನೆಯ ಪ್ರಥಮ ಖಾಯಂ ವರ್ಗಾವಣೆ/ ವಿಲೀನ ಆಗಿರುತ್ತದೆ ಎಂದು ತಿಳಿಸಿರುತ್ತಾರೆ. ಸದರಿಯವರ ಸೇವೆಯನ್ನು ಕಂದಾಯ ಇಲಾಖೆಯ ತಹಶೀಲ್ದಾರ್ ಹುದ್ದೆಯ ಕಾಲಿಕ ವೇತನ ಶ್ರೇಣಿಯಲ್ಲಿ ವಿಲೀನಗೊಳಿಸುವ ಷರತ್ತಿಗೊಳಪಟ್ಟು, ಇವರ ಸೇವೆಯನ್ನು ಕಂದಾಯ ಇಲಾಖೆಯಲ್ಲಿ ವಿಲೀನಗೊಳಿಸಲು ಶಿಕ್ಷಣ ಇಲಾಖೆಯು ಸಹಮತಿ ನೀಡಿರುತ್ತದೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸರ್ಕಾರದ ಯಾವುದೇ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ (ಸಿ ಅಂಡ್ ಆರ್) ಒಂದು ಇಲಾಖೆಯ ಅಧಿಕಾರಿ/ ನೌಕರರುಗಳನ್ನು ಇನ್ನೊಂದು ಇಲಾಖೆಗೆ ಖಾಯಂ ಆಗಿ ವಿಲೀನಗೊಳಿಸಲು ಅವಕಾಶವಿರುವುದಿಲ್ಲ. ಆದರೆ, ಕೆಲವೊಂದು ಸಂದರ್ಭಗಳಲ್ಲಿ ಒಂದು

ಇಲಾಖೆಯ ಅಧಿಕಾರಿ/ನೌಕರರನ್ನು ಇನ್ನೊಂದು ಇಲಾಖೆಯ ಸೇವೆಗೆ ಖಾಯಂ ಆಗಿ ವಿಲೀನಗೊಳಿಸುವ ಸಲುವಾಗಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) 1977ರ ನಿಯಮಗಳು ನಿಯಮ 16(ಎ) (ii) ರಡಿಯಲ್ಲಿ ಅವಕಾಶವನ್ನು ಕಲ್ಪಿಸಲಾಗಿದೆ. ಶ್ರೀ ಎನ್. ತೇಜಸ್‌ಕುಮಾರ್, ಉಪನ್ಯಾಸಕರು ಇವರ ವೇತನ ಶ್ರೇಣಿ ಹಾಗೂ ಪ್ರಸ್ತುತ ಕಂದಾಯ ಇಲಾಖೆಯ ತಹಶೀಲ್ದಾರ್ ಗ್ರೇಡ್-2 ವೃಂದದ ವೇತನ ಶ್ರೇಣಿಯು ಸಹ ರೂ. 11,400-21-600 ಒಂದೇ ಆಗಿರುತ್ತದೆ. ಆದುದರಿಂದ ಶಿಕ್ಷಣ ಇಲಾಖೆಯ ಶ್ರೀ ಎನ್. ತೇಜಸ್‌ಕುಮಾರ್ ಉಪನ್ಯಾಸಕರು ಪದವಿ ಪೂರ್ವ ಶಿಕ್ಷಣ ಇಲಾಖೆ (ಹಾಲಿ ನಿಯೋಜನೆ ಮೇಲೆ ವಿಶೇಷಾಧಿಕಾರಿ, ಮುಖ್ಯಮಂತ್ರಿಯವರ ಸಚಿವಾಲಯ) ಇವರ ಸೇವೆಯನ್ನು ನಿಬಂಧನೆಗಳಿಗೆ ಒಳಪಟ್ಟು, ಕಂದಾಯ ಇಲಾಖೆಯಲ್ಲಿ ನೇರ ನೇಮಕಾತಿ ಹುದ್ದೆಯಲ್ಲಿ ಖಾಯಂ ಆಗಿ ವಿಲೀನಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 430 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 6ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ, ಶಿಕ್ಷಣ ಇಲಾಖೆಯ ಉಪನ್ಯಾಸಕರಾದ ಶ್ರೀ ಎನ್. ತೇಜಸ್‌ಕುಮಾರ್ ಉಪನ್ಯಾಸಕರು ಪದವಿ ಪೂರ್ವ ಶಿಕ್ಷಣ ಇಲಾಖೆ ( ಹಾಲಿ ನಿಯೋಜನೆ ಮೇಲೆ ವಿಶೇಷಾಧಿಕಾರಿ, ಮುಖ್ಯಮಂತ್ರಿಯವರ ಸಚಿವಾಲಯ) ಇವರ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 16 (ಎ) II ರನ್ವಯ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು, ಕಂದಾಯ ಇಲಾಖೆಯಲ್ಲಿ ತಹಶೀಲ್ದಾರ್ ಗ್ರೇಡ್-2 ವೃಂದದ ವೇತನ ಶ್ರೇಣಿ ರೂ. 11,400-21-600ರ ಹುದ್ದೆಯಲ್ಲಿ ಖಾಯಂ ಆಗಿ ವರ್ಗಾವಣೆ ಮೂಲಕ ನೇಮಕಗೊಳಿಸಿ ಇವರನ್ನು ಕಂದಾಯ ಇಲಾಖೆಯಲ್ಲಿ ವಿಲೀನಗೊಳಿಸಿದೆ.

1 ಸದರಿ ಅಧಿಕಾರಿಯು ಕಂದಾಯ ಇಲಾಖೆಯ ತಹಶೀಲ್ದಾರ್ ಗ್ರೇಡ್-2 ಹುದ್ದೆಗೆ ನೇಮಕಾತಿ ಹೊಂದಿದ ಎರಡು ವರ್ಷಗಳ ಒಳಗಾಗಿ ಸದರಿ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದತಕ್ಕದ್ದು. ಸದರಿಯವರು ಈ ಅವಧಿಯಲ್ಲಿ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದದಿದ್ದಲ್ಲಿ ಅವರ ಸೇವೆಯನ್ನು ಮಾತೃ ಇಲಾಖೆಯಾದ ಶಿಕ್ಷಣ ಇಲಾಖೆಗೆ ಹಿಂದಿರುಗಿಸಲಾಗುವುದು.

2 ಖಾಯಂ ಆಗಿ ವರ್ಗಾವಣೆ ಹೊಂದಿರುವ ತಹಶೀಲ್ದಾರ್ ಗ್ರೇಡ್ -2 ವೃಂದದಲ್ಲಿ ಸದರಿಯವರ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ ಜೇಷ್ಠತಾ ನಿಯಮಾವಳಿಗಳು 1957ರ ನಿಯಮ 6ರ ಮೊದಲನೆ ಪರಂತುಕದನ್ವಯ ಸದರಿಯವರು ಕಂದಾಯ ಇಲಾಖೆಯ ಸೇವೆಗೆ ಸೇರುವ ದಿನಾಂಕದಿಂದ ಪರಿಗಣಿಸತಕ್ಕದ್ದು.

3 ಸದರಿಯವರ ಖಾಯಂ ವರ್ಗಾವಣೆಯನ್ನು ಕಂದಾಯ ಇಲಾಖೆಯ ತಹಶೀಲ್ದಾರ್ ಗ್ರೇಡ್-2 ವೃಂದದಲ್ಲಿ ನೇರ ನೇಮಕಾತಿಗೆ ಕಾಯ್ದಿರಿಸಿರುವ ರಿಕ್ತಸ್ಥಾನದ ವಿರುದ್ಧ ಪರಿಗಣಿಸತಕ್ಕದ್ದು.

**4** ಶ್ರೀ ಎನ್. ತೇಜಸ್‌ಕುಮಾರ್ ಇವರು ವರ್ಗಾವಣೆಯ ಭತ್ಯೆಗೆ ಅರ್ಹರಾಗಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಆರ್.106**

**(ಎಸ್.ಬಿ. ಸಸಾಲಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ

ಇಲಾಖೆ ಸೇವೆಗಳು-3

**ಕಂದಾಯ ಸಚಿವಾಲಯ**

**ವಿಷಯ :** ಆಸ್ತಿಗಳ ವಹಿವಾಟುಗಳಿಗೆ ಸಂಬಂಧಿಸಿದಂತೆ ಅಧ್ಯಯನ ನಡೆಸುವ ಬಗ್ಗೆ ಮೆ: ಸಿ.ಬಿ. ರಿಚರ್ಡ್ ಎಲೀಸ್ ಸಂಸ್ಥೆಗೆ ವಹಿಸಿ ಕೊಡಲು ಸರ್ಕಾರದ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ ಆರ್‌ಜಿಎನ್ 95/2009-10, ದಿನಾಂಕ: 05-09-2009

2) ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ : ಆಇ 1203 ವೆಚ್ಚ-12/09, ದಿನಾಂಕ : 30-10-2009

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 05-09-2009 ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ರಾಜಸ್ವ ಸಂಗ್ರಹಣೆ ಕುರಿತು ದಿನಾಂಕ : 19-08-2009 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಪ್ರಸಕ್ತ ಸಾಲಿನ ರಾಜಸ್ವ ಸಂಗ್ರಹಣೆಯಲ್ಲಿ ಅಂದಾಜು ಶೇ. 30 ರಷ್ಟು ಇಳಿಕೆಯಾಗಿರುವ ವಿಷಯವನ್ನು ಪರಿಶೀಲಿಸಲಾಗಿದ್ದು, ಆರ್ಥಿಕ ಹಿಂಜರಿತದಿಂದ ರಾಜಸ್ವ ಸಂಗ್ರಹಣೆಯಲ್ಲಿ ಉಂಟಾಗಿರುವ ಇಳಿಕೆಯನ್ನು ನಿವಾರಿಸಿ ಉತ್ತಮ ರಾಜಸ್ವ ಸಂಗ್ರಹಣೆ ಬರುವಂತೆ ಮಾಡಲು ಇಲಾಖೆಯು ಕೈಗೊಂಡಿರುವ ಅನೇಕ ಕ್ರಮಗಳನ್ನು ಸಹ ಆರ್ಥಿಕ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳ

ಗಮನಕ್ಕೆ ತರಲಾಗಿದ್ದು, ಈ ಬಗ್ಗೆ ಸ್ಥಿರಾಸ್ತಿಗಳ ವ್ಯವಹಾರಗಳಲ್ಲಿ ಸಾಕಷ್ಟು ಪರಿಣಿತಿ ಹೊಂದಿದಂತಹ ಸಂಘ ಸಂಸ್ಥೆಗಳಿಂದ ಸುಧೀರ್ಘವಾದ ಅಧ್ಯಯನವನ್ನು ಕೈಗೊಂಡು ಸರ್ಕಾರ ಮತ್ತು ಇಲಾಖೆ ಕೈಗೊಳ್ಳಬೇಕಾದ ಸುಧಾರಣೆಗಳು ಮತ್ತು ಕ್ರಮಗಳನ್ನು ಗುರುತಿಸಬೇಕೆಂದು ಆರ್ಥಿಕ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು ಸೂಚಿಸಿರುತ್ತಾರೆಂದು ಇಂತಹ ಅಧ್ಯಯನವನ್ನು ಆದಷ್ಟು ಶೀಘ್ರವಾಗಿ ಕೈಗೊಳ್ಳಬೇಕೆಂದು ಹಾಗೂ ಈ ಅಧ್ಯಯನಕ್ಕೆ ರೂ. 1,00,000/– ಕ್ಕಿಂತ ಮೇಲ್ಪಟ್ಟು ವೆಚ್ಚ ಭರಿಸಬೇಕಾದ ಪ್ರಸಂಗದಲ್ಲಿ Karnataka Transparency in Public Procurement Act 1999 ರಡಿ ಯಲ್ಲಿ ಸೂಕ್ತ ವಿನಾಯಿತಿ ಪಡೆಯಲು ಆರ್ಥಿಕ ಇಲಾಖೆಗೆ ಪ್ರಸ್ತಾವನೆಯನ್ನು ಕಳುಹಿಸಬೇಕೆಂದು ಸೂಚಿಸಿರುತ್ತಾರೆಂದು ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ತಿಳಿಸಿರುತ್ತಾರೆ.

ಮುಂದುವರೆದು, ಸಭೆಯಲ್ಲಿ ತೆಗೆದುಕೊಂಡ ತೀರ್ಮಾನದನ್ವಯ ಸ್ಥಿರಾಸ್ತಿಗಳ ವಹಿವಾಟುಗಳಲ್ಲಿ ಸಾಕಷ್ಟು ಪರಿಣಿತಿಯನ್ನು ಹೊಂದಿರುವಂತಹ 5 ಸಂಘ ಸಂಸ್ಥೆಗಳನ್ನು ಗುರುತಿಸಲಾಗಿದ್ದು, ಅವುಗಳು ಈ ಕೆಳಕಂಡಂತೆ ಇರುತ್ತದೆ.

1) ಮೆ : ಜೋನ್ಸ್ ಲ್ಯಾಂಗ್ ಲಾಸಲಿ ಮೇಘರಾಜ್
2) ಮೆ : ಸಿ.ಬಿ. ರಿಚರ್ಡ್ ಎಲೀಸ್
3) ಮೆ : ಜಯಸೂರ್ಯ ಅಂಡ್ ಅಸೋಸಿಯೇಟ್ಸ್
4) ಮೆ : ರೈನ್‌ಟ್ರೀ ಕನ್ಸಲ್‌ಟೆಂಟ್ಸ್
5) ಮೆ : ರವಿ ಲೋಬೋ ಅಂಡ್ ಕಂಪನಿ

ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಪತ್ರ ಸಂಖ್ಯೆ : ಸಿವಿಸಿ 20/2009–10 ದಿನಾಂಕ : 25–08–2009 ರಲ್ಲಿ ಸದರಿ ಅಧ್ಯಯನವನ್ನು ಕೈಗೊಂಡು ಎರಡು ತಿಂಗಳ ಒಳಗೆ ವರದಿಯನ್ನು ಸಲ್ಲಿಸಲು ಸದರಿ ಸಂಸ್ಥೆಗಳು ತಮ್ಮ ಒಪ್ಪಿಗೆಯನ್ನು ಸೂಚಿಸುವಂತೆ ಹಾಗೂ ಈ ಅಧ್ಯಯನಕ್ಕೆ ಅವರು ಅಪೇಕ್ಷಿಸುವ ಸಂಭಾವನೆಯನ್ನು ಸಹ ತಿಳಿಸುವಂತೆ ಕೊಟೇಷನ್‌ಗಳನ್ನು ಕರೆಯಲಾಗಿದ್ದು ಈ ಕೊಟೇಷನ್‌ನಲ್ಲಿ ಅಡಕಗೊಂಡಿರುವ TERMS OF REFERENCE ಮತ್ತು ಅಧ್ಯಯನ ಕಡ್ಡಾಯವಾಗಿ ಹೊಂದಿರಬೇಕಾದ ಅಂಶಗಳ ಬಗ್ಗೆ ವಿವರವಾಗಿ ತಿಳಿಸಿ ಇಂತಹ ಒಪ್ಪಿಗೆಯನ್ನು ದಿನಾಂಕ : 31–08–2009 ರೊಳಗೆ ಈ ಕಛೇರಿಗೆ ಸಲ್ಲಿಸಬೇಕೆಂದು ಸೂಚಿಸಲಾಗಿತ್ತೆಂದು ಆದರೆ ದಿನಾಂಕ 02-09-2009 ರ ಒಳಗೆ ಈ ಕೆಳಕಂಡ 3 ಸಂಸ್ಥೆಗಳು ಇಲಾಖೆಯು ಕೋರಿರುವ ಅಧ್ಯಯನವನ್ನು ಕೈಗೊಳ್ಳಲು ಸಿದ್ದವಿರುವುದಾಗಿ ಹಾಗೂ ತಾವು ಅಪೇಕ್ಷಿಸುವ ಸಂಭಾವನೆಯ ವಿವರಗಳನ್ನು ತಿಳಿಸಿರುತ್ತಾರೆ.

| ಕ್ರಮ ಸಂ. | ಸಂಸ್ಥೆಯ ಹೆಸರು | ಸಂಸ್ಥೆಯು ಸೂಚಿಸಿರುವ ಸಂಭಾವನೆ |
|---|---|---|
| 1 | ಮೆ : ಜೋನ್ಸ್ ಲ್ಯಾಂಗ್ ಲಾಸಲೀ ಮೇಘರಾಜ್ | ರೂ. 15,00,000 |
| 2. | ಮೆ : ಸಿ.ಬಿ.ರಿಚರ್ಡ್ ಎಲೀಸ್ | ರೂ. 5,50,000 |
| 3. | ಮೆ : ರವಿ ಲೋಬೊ ಅಂಡ್ ಕಂಪನಿ | ರೂ. 4,00,000 |

ಮೇಲ್ಕಂಡ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಮೆ: ಜೋನ್ಸ್ ಲ್ಯಾಂಗ್ ಲಾಸಲೀ ಮೇಘರಾಜ್ ಇವರು ಸೂಚಿಸಿರುವ ಸಂಭಾವನೆ ಅತಿ ಹೆಚ್ಚಿನ ಮೊತ್ತವಾಗಿದ್ದು, ಇವರ ಪ್ರಸ್ತಾವನೆಯನ್ನು ಪರಿಗಣಿಸುವುದು ಸೂಕ್ತವಲ್ಲವೆಂದು ಮೆ: ರವಿ ಲೋಬೊ ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಈ ಸಂಸ್ಥೆಯ ಸಾಮರ್ಥ್ಯ ಮತ್ತು ಅನುಭವ ಮೆ: ಜೋನ್ಸ್ ಲ್ಯಾಂಗ್ ಲಾಸಲೀ ಮೇಘರಾಜ್ ಅಥವಾ ಮೆ: ಸಿ.ಬಿ. ರಿಚರ್ಡ್ ಎಲೀಸ್ ಈ ಸಂಸ್ಥೆಗಳ ಮಟ್ಟಕ್ಕೆ ಬರುವುದಿಲ್ಲವೆಂದು ಅಭಿಪ್ರಾಯಪಡಲಾಯಿತೆಂದು ಮೂರು ಸಂಸ್ಥೆಗಳು ಸಲ್ಲಿಸಿರುವ ಪ್ರಸ್ತಾವನೆಗಳ ಪೈಕಿ ಮೆ: ರವಿ ಲೋಬೊ ಅಂಡ್ ಕಂಪನಿ ಇವರು ಅತಿ ಕಡಿಮೆ ದರಗಳನ್ನು ನಮೂದಿಸಿದ್ದರೂ ಸಹ ಪ್ರಸ್ತಾಪಿಸಿರುವ ಅಧ್ಯಯನದ ವ್ಯಾಪ್ತಿ ಮತ್ತು ಈ ಸಂಸ್ಥೆ ಹೊಂದಿರುವ ಪರಿಣಿತಿ, ಅಧ್ಯಯನ ಕ್ಷೇತ್ರದಲ್ಲಿ ಹೊಂದಿರುವಂತಹ ಅನುಭವ ಎಲ್ಲಾ ಅಂಶಗಳನ್ನು ವಿಶ್ಲೇಷಿಸಿದಾಗ ಈ ಸಂಸ್ಥೆಯವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಗಣಿಸುವುದು ಸೂಕ್ತವಲ್ಲವೆಂದು ಅಭಿಪ್ರಾಯಪಡಲಾಗಿದೆ ಎಂದು ತಿಳಿಸಿದ್ದಾರೆ.

ಮೆ: ಸಿ.ಬಿ. ರಿಚರ್ಡ್ ಎಲೀಸ್ ಈ ಸಂಸ್ಥೆಯವರು ಪ್ರಸ್ತಾಪಿತ ಕ್ಷೇತ್ರದಲ್ಲಿ ಅಪಾರ ಅನುಭವವನ್ನು ಪಡೆದಿದ್ದು, ಇಂತಹ ಅನೇಕ ಅಧ್ಯಯನಗಳನ್ನು ಈಗಾಗಲೇ ನಡೆಸಿರುವ ಹಾಗೂ ಅಂತರ ರಾಷ್ಟ್ರೀಯ ಮಟ್ಟದಲ್ಲೂ ಸಹ ಕಾರ್ಯಾಚರಣೆಯನ್ನು ನಡೆಸುತ್ತಿರುವ ಸಂಸ್ಥೆ ಇದಾಗಿರುತ್ತದೆ ಎಂದು ಆದ್ದರಿಂದ ಇವರು ನಮೂದಿಸಿರುವ ಸಂಭಾವನೆ ರೂ. 5,50,000/– ಗಳನ್ನು ಒಪ್ಪಿಕೊಂಡು ಇವರಿಗೆ ಅಧ್ಯಯನ ನಡೆಸುವ ಜವಾಬ್ದಾರಿಯನ್ನು ಒಪ್ಪಿಸಬಹುದಾಗಿದ್ದು, ಸದರಿ ಸಂಸ್ಥೆಯು ತಮ್ಮ ಪ್ರಸ್ತಾವನೆಯಲ್ಲಿ ಪ್ರಾರಂಭಿಕವಾಗಿ ಒಟ್ಟು ಶೇ 50% ರಷ್ಟು ಸಂಭಾವನೆ, ಕರಡು ವರದಿಯನ್ನು ಸಲ್ಲಿಸುವ ಸಮಯದಲ್ಲಿ 30% ರಷ್ಟು ಸಂಭಾವನೆ ಮತ್ತು ಅಂತಿಮ ವರದಿಯನ್ನು ಸಲ್ಲಿಸುವಾಗ 20% ರಷ್ಟು ಸಂಭಾವನೆ ನೀಡುವಂತೆ ಕೋರಿರುತ್ತಾರೆಂದು ಈ ಎಲ್ಲಾ ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿದಾಗ ಸ್ಥಿರಾಸ್ತಿಗಳ ವಹಿವಾಟುಗಳ ಕುರಿತು ನಡೆಸಬೇಕಾದ ಅಧ್ಯಯವನ್ನು ಮೆ:ಸಿ.ಬಿ. ರಿಚರ್ಡ್ ಎಲೀಸ್ ಸಂಸ್ಥೆಗೆ ವಹಿಸಿಕೊಡಲು ಮತ್ತು ಈ ಅಧ್ಯಯನಕ್ಕೆ ತಗಲುವ ರೂ. 5,50,000/–

ಸಂಭಾವನೆಯನ್ನು ಅವರಿಗೆ ನೀಡಲು ಹಾಗೂ ಮೇಲೆ ವಿವರಿಸಿರುವಂತೆ ಮೂರು ಕಂತುಗಳಲ್ಲಿ ಅವರಿಗೆ ಹಣವನ್ನು ಪಾವತಿಸಲು ಹಾಗೂ ಮೆ: ಸಿ.ಬಿ. ರಿಚರ್ಡ್ ಎಲೀಸ್ ಇವರಿಗೆ ವಹಿಸಿಕೊಡಲು ಅವಶ್ಯವಿರುವ ವಿನಾಯಿತಿಯನ್ನು Karnataka Transparency in Public Procurement Act 1999 ರ ಕಲಂ 4(ಜಿ) ಪ್ರಕಾರ ವಿನಾಯಿತಿ ನೀಡಲು ಸಹ ಸರ್ಕಾರದ ಅನುಮೋದನೆಯನ್ನು ನೀಡುವಂತೆ ಹಾಗೂ ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2030–03–001–2–04 (051 ಸಾಮಾನ್ಯ ವೆಚ್ಚ) ಅಡಿಯಲ್ಲಿ ಭರಿಸಲು ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (2) ರ ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ ಆಇ 1203 : ವೆಚ್ಚ –12–/09, ದಿನಾಂಕ 30–10–2009 ರಲ್ಲಿ ರಾಜ್ಯದಲ್ಲಿನ ಸ್ಥಿರಾಸ್ತಿಗಳ ವಹಿವಾಟಿನ ಬಗ್ಗೆ ಅಧ್ಯಯನ ನಡೆಸುವ ಕಾರ್ಯವನ್ನು ರೂ. 5.50 ಲಕ್ಷಗಳ ವೆಚ್ಚದಲ್ಲಿ ಮೆ: ಸಿ.ಬಿ. ರಿಚರ್ಡ್ ಎಲೀಸ್, ಬೆಂಗಳೂರು ಇವರಿಗೆ ನೇರವಾಗಿ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ರ ಕಲಂ 4 (ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಕಂದಾಯ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 142 ಮುನೋಮು 2009, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ರಾಜ್ಯದಲ್ಲಿನ ಸ್ಥಿರಾಸ್ತಿಗಳ ವಹಿವಾಟಿನ ಬಗ್ಗೆ ಅಧ್ಯಯನ ನಡೆಸುವ ಕಾರ್ಯವನ್ನು ರೂ 5.50 ಲಕ್ಷಗಳ ವೆಚ್ಚದಲ್ಲಿ ಪ್ರಾರಂಭಿಕವಾಗಿ ಒಟ್ಟು 50% ರಷ್ಟು ಸಂಭಾವನೆ, ಕರಡು ವರದಿಯನ್ನು ಸಲ್ಲಿಸುವ ಸಮಯದಲ್ಲಿ 30% ರಷ್ಟು ಸಂಭಾವನೆ ಮತ್ತು ಅಂತಿಮ ವರದಿಯನ್ನು ಸಲ್ಲಿಸುವಾಗ 20% ರಷ್ಟು ಸಂಭಾವನೆ ನೀಡುವ ಷರತ್ತಿಗೊಳಪಡಿಸಿ ಮೆ: ಸಿ.ಬಿ. ರಿಚರ್ಡ್ ಎಲೀಸ್, ಬೆಂಗಳೂರು ಇವರಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2030–03–001–2–04 (051 – ಸಾಮಾನ್ಯ ವೆಚ್ಚ) ಅಡಿಯಲ್ಲಿ ಭರಿಸಬಹುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ: ಆಇ 1203 ವೆಚ್ಚ–12/09, ದಿನಾಂಕ: 30–10–2009 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಟಿ.ಕೆ. ರಾಮಚಂದ್ರ)**

ಪಿ.ಆರ್ 107

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ

(ನೋಂದಣಿ ಮತ್ತು ಮುದ್ರಾಂಕ)

## ಕಂದಾಯ ಸಚಿವಾಲಯ

## ಸುತ್ತೋಲೆ

ಸಂ. ಆರ್‌ಡಿ 199 ಎಲ್‌ಜಿಬಿ 2009, ಬೆಂಗಳೂರು, ದಿನಾಂಕ : 04–01–2010

**ವಿಷಯ :** ವಕ್ಫ್ ಆಸ್ತಿಗಳು– ಅವುಗಳಿಗೆ ಸಂಬಂಧಿಸಿದ ದಾಖಲೆಗಳನ್ನು ಕ್ರಮಗೊಳಿಸುವ (ಅಪ್‌ಡೇಟಿಂಗ್) ಬಗ್ಗೆ.

**ಉಲ್ಲೇಖ :** ಸರ್ಕಾರದ ಸುತ್ತೋಲೆ ಸಂಖ್ಯೆ : ಆರ್‌ಡಿ 34 ಟಿಆರ್‌ಆರ್ 85, ದಿನಾಂಕ 18–03–1985

ಕರ್ನಾಟಕ ರಾಜ್ಯ ವಕ್ಫ್ ಮಂಡಲಿಯು ವಕ್ಫ್ ಆಸ್ತಿಗಳ ಉತ್ತಮ ನಿರ್ವಹಣೆಗಾಗಿ ಮತ್ತು ಮೇಲುಸ್ತುವಾರಿಗಾಗಿ ವಕ್ಫ್ ಸ್ವತ್ತುಗಳನ್ನು ಸಂರಕ್ಷಿಸುವಂತಹ ಮುಖ್ಯ ಹೊಣೆಗಾರಿಕೆಯೊಂದಿಗೆ ವಕ್ಫ್ ಅಧಿನಿಯಮ 1995ರ (ಕೇಂದ್ರಾಧಿನಿಯಮ ಸಂ.43) ಉಪಬಂಧಗಳ ಮೇರೆಗೆ ರಚಿಸಲಾದ ಶಾಸನಬದ್ಧ ಮಂಡಳಿಯಾಗಿದೆ. ಕರ್ನಾಟಕ ವಕ್ಫ್ ನಿಯಮಗಳು, 1997ರ 6ನೇ ನಿಯಮದ ಮೇರೆಗೆ ವಕ್ಫ್ ಆಸ್ತಿಗಳ ದಾಖಲೆಗಳನ್ನು ಇಂದಿನವರೆಗೆ ಕ್ರಮಗೊಳಿಸುವುದು ಕಡ್ಡಾಯವಾಗಿದೆ. ಸುಮಾರು ಶೇಕಡಾ 50 ರಷ್ಟು ವಕ್ಫ್ ಆಸ್ತಿಗಳನ್ನು ಕಂದಾಯ ಮತ್ತು ಪುರಸಭೆ ದಾಖಲೆಗಳಲ್ಲಿ ವ್ಫಕ್ ಸ್ವತ್ತುಗಳೆಂದು ತೋರಿಸಿಲ್ಲದಿರುವುದಾಗಿ ಅಂದಾಜು ಮಾಡಲಾಗಿದೆ. ಕೆಲವು ಪ್ರಕರಣಗಳಲ್ಲಿ ಮುತಾವಲಿಗಳು ಆಸ್ತಿ ದಾಖಲೆಗಳ ಸಂಬಂಧಿಸಿದ ಅಂಕಣಗಳಲ್ಲಿ ತಮ್ಮ ಹೆಸರುಗಳನ್ನು ಸೇರಿಸಲು ವ್ಯವಸ್ಥೆ ಮಾಡಿರುವಂಥ ಉದಾಹರಣೆಗಳು ಸರ್ಕಾ'ರದ ಗಮನಕ್ಕೆ ಬಂದಿದ್ದು, ಇದು ಆಕ್ಷೇಪಣೀಯ ಮಾತ್ರವಲ್ಲದೆ ಕಾನೂನು ಬಾಹಿರವು ಸಹ ಆಗಿದೆ. ಇದೂ ಅಲ್ಲದೆ, ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅದಿಭೋಗದಾರರನ್ನು ಹೊರಹಾಕುವ) ಅಧಿನಿಯಮ, 1974ರ 2(ಇ)(ವಿ) ಪ್ರಕರಣದ ಮೇರೆಗೆ ವಕ್ಫ್ ಆಸ್ತಿಗಳನ್ನು ಸಾರ್ವಜನಿಕ ಆವರಣಗಳೆಂಬುದಾಗಿ ಘೋಷಿಸಲಾಗಿದೆ. ಕಂದಾಯ ದಾಖಲೆಗಳಲ್ಲಿ (ಆರ್.ಟಿಸಿ. ಅಡೆಂಗಲ್ ಇತ್ಯಾದಿ) ನಮೂದುಗಳನ್ನು ಸೇರಿಸುವ – ಮತ್ತು ಬದಲಾಯಿಸುವ ಮೂಲಕ ಸಂಬಂಧಪಟ್ಟ ವಕ್ಫ್ ಸಂಸ್ಥೆಯ ಹೆಸರಿನಲ್ಲಿ ರಾಜ್ಯದಲ್ಲಿರುವ

ವಕ್ಫ್ ಭೂಮಿಗಳಿಗೆ ಸಂಬಂಧಿಸಿದ ಕಂದಾಯ ದಾಖಲೆಗಳನ್ನು ಇಂದಿನವರೆಗೆ ಕ್ರಮಗೊಳಿಸುವಂತೆ ಸರ್ಕಾರದಿಂದ ಉಲ್ಲೇಖಿತ ಸುತ್ತೋಲೆಯಲ್ಲಿ ಸೂಚನೆಗಳನ್ನು ನೀಡಲಾಗಿದೆ.

ಮೇಲಿನ ಸಂದರ್ಭಗಳನುಸಾರ ಜಿಲ್ಲಾಧಿಕಾರಿಗಳು ಈ ಪ್ರಕರಣಗಳನ್ನು ತ್ವರಿತವಾಗಿ ಪರಿಶೀಲಿಸಬೇಕೆಂದು ಮತ್ತು ಕಂದಾಯ/ ಪುರಸಭೆ ದಾಖಲೆಗಳಲ್ಲಿ ಸಂಬಂಧಪಟ್ಟ ವಕ್ಫ್ ಸಂಸ್ಥೆಯ ಹೆಸರನ್ನು ನಮೂದಿಸಿ ಇಂದಿನವರೆಗೆ ಕ್ರಮಗೊಳಿಸುವಂತೆ ನೋಡಿಕೊಳ್ಳಬೇಕೆಂದು ಮತ್ತು ಮುಸ್ಲಿಂ ಸಮುದಾಯದವರ ಶವಗಳನ್ನು ಹೂಳುವುದಕ್ಕಾಗಿ ಭೂಮಿ ಬಳಸಲಾಗುತ್ತಿರುವುದಾಗಿ ಸ್ಥಾಪಿತವಾಗಿರುವಲ್ಲಿ ಅವುಗಳನ್ನು ಕಂದಾಯ ದಾಖಲೆಗಳಲ್ಲಿ ಮುಸ್ಲಿಂ ಸ್ಮಶಾನ ಭೂಮಿ ಎಂಬ ಪದವನ್ನು ಸೇರಿಸತಕ್ಕುದ್ದೆಂದು ಸರ್ಕಾರವು ಈ ಮೂಲಕ ನಿರ್ದೇಶಿಸಿದೆ. ಕಂದಾಯ/ ಪುರಸಭೆ ದಾಖಲೆಗಳನ್ನು ಇಂದಿನವರೆಗೆ ಕ್ರಮಗೊಳಿಸುವುದರ ಸಂಬಂಧದಲ್ಲಿ ಸಾಧಿಸಿದ ಪ್ರಗತಿಯನ್ನು ಮೂರು ತಿಂಗಳುಗಳಿಗೊಮ್ಮೆ ಸರ್ಕಾರಕ್ಕೆ ವರದಿ ಮಾಡತಕ್ಕದ್ದು.

**(ಜಿ.ಎಸ್. ನಾರಾಯಣಸ್ವಾಮಿ)**

**ಪಿ.ಆರ್.108** **ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ**

## URBAN DEVELOPMENT SECRETARIAT

**Sub :** Appointment of Sri Mohammed Khalander Khan as Transport Planner in the Directorate of Urban Land Transport On Contract Basis..

**Ref :** 1.Government Order No.UDD 134 BMR 2006, (1), BANGALORE Dated 08-03-2007.
2.Government Order No. UDD 134 BMR 2006(2), BANGALORE,Dated 09-03-2007.

**Preamble:**

As per the recommendations of the National Working Group on Urban transport for the 11$^{th}$ Plan and the guidelines of the National Urban Transportation Policy, the Government of Karnataka in its Government Order read at (1), has created the State Directorate of Urban Land Transport (DULT) under the Urban Development Department. The key objective of the DULT is to ensure integration and co-ordination of land-use planning and development of transport related infrastructure in urban areas..

The functions of DULT has been defined in G.O. read at (2) with jurisdictions of seven Municipal Corporations in the State, viz., Bangalore, Mysore, Mangalore, Hubli-Dharwar, Belgaum Gulbarga and Bellary. Accordingly, one of the key functions is to take up Comprehensive Traffic and Transportation Studies (CTTS) for six cities, excluding Bangalore. Thus the need for integrating land-use planning and transportation is seen as a major thrust and challenge for the DULT.

The team under the Commissioner, DULT is required to address the above mentioned critical areas on priority. It is noted that addressing these tasks and challenges requires the active role of specialists with multidisciplinary approaches. The specialists should have and understanding of the planning, technology for planning, land use changes, planning with focus on mobility related aspects and capacity building competencies.

To fill up the vacant posts of Transport Planner in DULT on contract basis, the DULT has called for applications from the eligible Engineers by Newspaper, Vijaya Karnataka. The advertisement appeared in the Paper on 31-07-2009. In response to this advertisement 14 candidates have submitted their applications and only 10 candidates appeared for the interview held by DULT. Out of 10 only 3 candidates found eligible for the post of Transport Planner and 2 candidates for the post of Traffic Engineer.

DULT has proposed to take the one Transport Planner and one Traffic Engineer on contract basis at a monthly consolidated lumpsum payment of Rs.25.000/- for Transport Planner and Rs.20.000/- per month for Traffic Engineer.

Now, Sri Mohammed Khalander Khan, Transport Planner. expressed his willingness to work in DULT with the above consolidated payment of Rs.25.000/- per month. Hence the following Order.

**Government Order No. UDD 408 BMR 2009 Bangalore, Dated 24$^{th}$ December 2009**

Government are pleased to accord sanction for utilizing the services of Sri Mohammed Khalander Khan as Transport Planner in DULT on contract basis with a consolidated lumpsum payment

of Rs.25.000 per month, under the sanctioned post of Transport Planner, initially for a period of one year with the following conditions.

1. The candidate shall furnish a bond with undertaking to serve DULT for a minimum period of one year.
2. In case of leaving DULT service before one year, he should bring to the notice of the Commissioner, DULT at least one month earlier.
3. The services of the Transport Planner will be utilized in the following areas:
   a) Preparation of Comprehensive Traffic and Transportation Study for 6 city corporations.
   b) Preparation of Comprehensive Traffic and Transportation Study for 2 tier cities.
   c) Non motorized transport policy and EC Bike.
   d) Parking Policy and Pedestrian Policy for cities other than Bangalore.
   e) Any other works assigned by the Commissioner, DULT

The services of Sri Mohammed Khalander Khan will be utilized until such time the Commissioner. DULT deems fit. Sri Mohammed Khalander Khan would be paid consolidated payment fo Rs.25.000/- per month.

By Order and in the name of the Governor of Karnataka,

PR.196

**(M.S. Premchandra)**
Under Secretary to Govt.
Urban Development Department.

**ಕಾರ್ಮಿಕ ಸಚಿವಾಲಯ**

ಸೇರ್ಪಡೆ ಆದೇಶ

ಸಂಖ್ಯೆ: ಕಾಇ 2 ಎಲ್‌ಡಬ್ಲ್ಯೂಎ 2008. ಬೆಂಗಳೂರು, ದಿನಾಂಕ 16ನೇ ಜನವರಿ 2010

**ವಿಷಯ :** ರಾಷ್ಟ್ರೀಯ ಸ್ವಾಸ್ಥ್ಯ ಬೀಮಾ ಯೋಜನೆಯನ್ನು ರಾಜ್ಯದ ಆಯ್ದ 5 ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸುವ ಬಗ್ಗೆ

**ಉಲ್ಲೇಖ :** 1. ಸರ್ಕಾರದ ಆದೇಶ ಸಂಖ್ಯೆ : ಕಾಇ 2 ಎಲ್‌ಡಬ್ಲ್ಯೂಎ 2008 ದಿನಾಂಕ: 24-11-2008.

2. ಕಾರ್ಮಿಕ ಆಯುಕ್ತರು ಹಾಗೂ ಅಧ್ಯಕ್ಷರು, ಕರ್ನಾಟಕ ರಾಜ್ಯ ರಾಷ್ಟ್ರೀಯ ಸ್ವಾಸ್ಥ್ಯ ಬೀಮಾ ಯೋಜನಾ ಸೊಸೈಟಿ, ಬೆಂಗಳೂರು ಇವರ ಪತ್ರ ಸಂಖ್ಯೆ: ಆರ್‌ಎಸ್‌ಬಿವೈ/ಸಿಆರ್-7/2009-10, ದಿನಾಂಕ: 26-12-2009.

ಓದಲಾದ (1)ರ ಸರ್ಕಾರದ ಆದೇಶದಲ್ಲಿ ರಾಷ್ಟ್ರೀಯ ಸ್ವಾಸ್ಥ್ಯ ಬೀಮಾ ಯೋಜನೆಯನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸುವ ಬಗ್ಗೆ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಅನುಷ್ಠಾನ ಸಮಿತಿಯನ್ನು ರಚಿಸಲಾಗಿದೆ. ಮೇಲೆ ಓದಲಾದ (2)ರ ಪತ್ರದಲ್ಲಿ ಕಾರ್ಮಿಕ ಆಯುಕ್ತರು ಹಾಗೂ ಅಧ್ಯಕ್ಷರು ಕರ್ನಾಟಕ ರಾಷ್ಟ್ರೀಯ ಸ್ವಾಸ್ಥ್ಯ ಬೀಮಾ ಯೋಜನಾ ಸೊಸೈಟಿ, ಬೆಂಗಳೂರು ಇವರು ಸದರಿ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು (1) ಜಿಲ್ಲಾ ರಕ್ಷಣಾಧಿಕಾರಿ, ಪೊಲೀಸ್ ಇಲಾಖೆ (2) ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (3) ಜಿಲ್ಲಾ ವಾರ್ತಾಧಿಕಾರಿ, ವಾರ್ತಾ ಇಲಾಖೆ, ಈ ಮೂರು ಇಲಾಖೆಯ ಜಿಲ್ಲಾ ಮಟ್ಟದ ಅಧಿಕಾರಿಗಳ ಸಹಕಾರ ಅಗತ್ಯವಿರುವುದರಿಂದ, ಈಗಾಗಲೇ ರಚಿಸಲಾದ **ಜಿಲ್ಲಾ ಮಟ್ಟದ ಅನುಷ್ಠಾನ ಸಮಿತಿಗೆ** ಇವರುಗಳನ್ನು ಸದಸ್ಯರನ್ನಾಗಿ ಸೇರಿಸಿ ಸೂಕ್ತ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಈ ಮೇಲೆ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಇದೇ ಸಮ ಸಂಖ್ಯೆಯ ಆದೇಶ ದಿನಾಂಕ: 24-11-2008ರ ಆದೇಶ ಭಾಗದ ಪುಟ-2ರ ಕ್ರ.ಸಂ.8ರ ನಂತರ **"(9) ಜಿಲ್ಲಾ ರಕ್ಷಣಾಧಿಕಾರಿ, ಪೊಲೀಸ್ ಇಲಾಖೆ (10) ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, (11) ಜಿಲ್ಲಾ ವಾರ್ತಾಧಿಕಾರಿ, ವಾರ್ತಾ ಇಲಾಖೆ"** ಇವರುಗಳನ್ನು ಜಿಲ್ಲಾ ಮಟ್ಟದ ಅನುಷ್ಠಾನ ಸಮಿತಿಗೆ **ಸದಸ್ಯರೆಂದು** ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.197

**ಇಬ್ರಾಹಿಂ ಗೂನಡ್ಕ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ (ಬಾಕಾಕೋ)
ಕಾರ್ಮಿಕ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಗ್ರೂಪ್-ಎ ವೃಂದದ ಹುದ್ದೆಯ ಸೃಜನೆ ಬಗ್ಗೆ.

**ಓದಲಾಗಿದೆ:** ಮಾನ್ಯ ಮುಖ್ಯಮಂತ್ರಿಯವರ ಟಿಪ್ಪಣಿ ಸಂಖ್ಯೆ: ಪಿಎಸ್‌ಸಿಎಂ/3771/2009 ದಿನಾಂಕ: 12-11-2009

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 12-11-2009ರ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಯವರು ಶ್ರೀ ಹೆಚ್. ಆರ್. ರಾಜಪ್ಪ, ಉಪ ನಿರ್ದೇಶಕರು, ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮಾನ್ಯ ಮುಖ್ಯಮಂತ್ರಿಯವರ ವಿಶೇಷ ಕರ್ತವ್ಯಾಧಿಕಾರಿ ಹುದ್ದೆಗೆ ನಿಯೋಜಿಸುವಂತೆ ಆದೇಶಿಸಿದ್ದಾರೆ. ಆದ್ದರಿಂದ ಮಾನ್ಯ ಮುಖ್ಯಮಂತ್ರಿಯವರು ಆದೇಶಿಸಿರುವಂತೆ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಒಂದು ಗ್ರೂಪ್-ಎ ಹುದ್ದೆಯ ಸೃಜನೆಯಾಗಬೇಕಿದ್ದು, ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 581 ಸಅಸೇ 2009, ಬೆಂಗಳೂರು ದಿನಾಂಕ 16ನೇ ಜನವರಿ 2010**

ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಗ್ರೂಪ್-ಎ ವೃಂದದ ಒಂದು ಹುದ್ದೆಯನ್ನು ದಿನಾಂಕ: 24-11-2009ರಿಂದ ಪೂರ್ವಾನ್ವಯವಾಗುವಂತೆ ಸೃಜಿಸಲಾಗಿದೆ..

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1446 ವೆಚ್ಚ-12/2009, ದಿನಾಂಕ: 26-12-2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.198

**(ಎಂ.ಎಸ್. ಶಿವರಾಮ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು-3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಜಂಟಿ ಇಲಾಖಾ ವಿಚಾರಣೆ – (1) ಶ್ರೀ ಡಿ.ಬಿ. ಗಣಾಚಾರಿ, ನಿವೃತ್ತ ಅಧೀನ ಕಾರ್ಯದರ್ಶಿ (2) ಶ್ರೀ ಮುಖ್ತಾರ್‌ಪಾಷಾ, ಸಹಾಯಕರು (3) ಶ್ರೀ ಕೆ.ವೈ. ರಮೇಶ್, ಸಹಾಯಕರು (4) ಶ್ರೀ ಶ್ರೀನಿವಾಸ ಕಿರಿಯ ಸಹಾಯಕರು ಇವರುಗಳ ವಿರುದ್ಧ – ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 334 ಎಸ್‌ಇಎನ್ 2006, ದಿನಾಂಕ 28-10-2006.
2. ವಿಚಾರಣಾ ವರದಿ ಸಂಖ್ಯೆ ಲೋಕ್/ಎಆರ್‌ಇ-1/ಇಎನ್‌ಕ್ಯೂ- 14/2007-08, ದಿನಾಂಕ 31-3-2008 ಹೆಚ್ಚುವರಿ ನಿಬಂಧಕರು (ವಿಚಾರಣೆಗಳು-3), ಕರ್ನಾಟಕ ಲೋಕಾಯುಕ್ತ ಬೆಂಗಳೂರು ಅವರಿಂದ.
3. ಪತ್ರ ಸಂಖ್ಯೆ ಲೋಕ್/ಎಆರ್‌ಇ-1/ಇಎನ್‌ಕ್ಯೂ-14/2007-08, ದಿನಾಂಕ 17-4-2008, ಹೆಚ್ಚುವರಿ ನಿಬಂಧಕರು (ವಿಚಾರಣೆಗಳು-3) ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರಿಂದ,
4. ನೋಟೀಸ್ ಸಂಖ್ಯೆ ಸಿಆಸುಇ 334 ಎಸ್‌ಇಎನ್ 2006, ದಿನಾಂಕ 11-6-2008.
5. ಮುಖ್ತಾರ್‌ಪಾಷಾ (15-7-2008), ಕೆ.ವೈ. ರಮೇಶ್(4-8-2008), ಶ್ರೀನಿವಾಸ್ (11-7-2008) ಅವರುಗಳು ಸಲ್ಲಿಸಿದ ಉತ್ತರ.

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರ ಸಚಿವಾಲಯದ ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಹೊಸ ನರ್ಸಿಂಗ್ ಶಾಲೆಗಳನ್ನು ತೆರೆಯಲು, ಪ್ಯಾರಾ ಮೆಡಿಕಲ್ ಶಾಲೆಗಳಲ್ಲಿ ಹೊಸ ಕೋರ್ಸ್‌ಗಳನ್ನು ಪ್ರಾರಂಭಿಸಲು ಸರ್ಕಾರದ ಅನುಮತಿ ನೀಡುವಲ್ಲಿ ಅಪಾರ ಪ್ರಮಾಣದ ಅಕ್ರಮ ಸಂಭಾವನೆಯನ್ನು ಪಡೆಯುತ್ತಿದ್ದಾರೆಂಬ ದೂರುಗಳ ಮೇಲೆ ಲೋಕಾಯುಕ್ತ ಪೊಲೀಸರು ದಿನಾಂಕ 28-07-2006ರಂದು ಶೋಧಿಸಿದಾಗ ಸರಿಯಾದ ಲೆಕ್ಕವಿಡದೆ ಒಟ್ಟು ರೂ. 87,760ಗಳನ್ನು ತಮ್ಮಗಳ ಬಳಿ ಹೊಂದಿದ್ದ ಆರೋಪಕ್ಕಾಗಿ (1) ಶ್ರೀ ಡಿ.ಬಿ. ಗಣಾಚಾರಿ, ಅಧೀನ ಕಾರ್ಯದರ್ಶಿ (2) ಶ್ರೀ ಮುಖ್ತಾರ್‌ಪಾಷಾ, ಸಹಾಯಕರು (3) ಶ್ರೀ ಕೆ.ವೈ. ರಮೇಶ್, ಸಹಾಯಕರು (4) ಶ್ರೀ ಶ್ರೀನಿವಾಸ, ಕಿರಿಯ ಸಹಾಯಕರು ಅವರುಗಳ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ 28-10-2006ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14-ಎ ಅನ್ವಯ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪಲೋಕಾಯುಕ್ತರಿಗೆ ವಹಿಸಲಾಯಿತು. ವಿಚಾರಣೆಯು ಪ್ರಗತಿಯಲ್ಲಿದ್ದಾಗ ಶ್ರೀ ಡಿ.ಬಿ. ಗಣಾಚಾರಿಯವರು ದಿನಾಂಕ 30-04-2007ರಂದು ವಯೋನಿವೃತ್ತಿ ಹೊಂದಿದರು. ಇವರಿಗೆ ಸಂಬಂಧಪಟ್ಟಂತೆ ಪ್ರಕರಣವನ್ನು ಪ್ರತ್ಯೇಕವಾಗಿ ಕೆ.ಸಿ.ಎಸ್.ಆರ್. ನಿಯಮ 214ರನ್ವಯ ಪರಿಶೀಲಿಸಲಾಗುವುದು.

ಸನ್ಮಾನ್ಯ ಉಪಲೋಕಾಯುಕ್ತರಿಂದ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ ಇವರು ವಿಚಾರಣೆಯನ್ನು ನಡೆಸಿ ಮೇಲೆ (2)ರಲ್ಲಿ ಓದಲಾದ ದಿನಾಂಕ 31-3-2008ರ ವಿಚಾರಣಾ ವರದಿಯನ್ನು ಸಲ್ಲಿಸಿ ಆರೋಪಗಳ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು :

- 2ನೇ ಆರೋಪಿ ಶ್ರೀ ಮುಖ್ತಾರ್‌ಪಾಷಾ, ಸಹಾಯಕರು ಇವರ ಬಳಿ ರೂ.5,750 ಇದ್ದುದ್ದಕ್ಕೆ ವಿವರಣೆಯನ್ನು ನೀಡಿ ಅವರ ಸಂಬಂಧಿಯೊಬ್ಬರು ಮೊಬೈಲ್ ಫೋನ್ ಖರೀದಿಸುವ ಸಲುವಾಗಿ ಎ.ಟಿ.ಎಂ.ನಿಂದ ರೂ.4,500ಗಳನ್ನು ದಿನಾಂಕ 28-07-2006ರಂದು ಡ್ರಾ ಮಾಡಿ ಕೊಟ್ಟಿದ್ದರೆಂದು ತಿಳಿಸಿರುತ್ತಾರೆ ಹಾಗೂ ಅದಕ್ಕೆ ಸಂಬಂಧಪಟ್ಟಂತೆ 3 ಎ.ಟಿ.ಎಂ. ಸ್ಲಿಪ್‌ಗಳನ್ನು ಹಾಜರ್ಪಡಿಸಿರುತ್ತಾರೆ. ಆರೋಪಿಯು ತನ್ನ ಸಂಬಂಧಿಯನ್ನು ಸಾಕ್ಷಿಯಾಗಿ ಹಾಜರುಪಡಿಸದ ಕಾರಣ ಇವುಗಳನ್ನು ನಂಬಲು ಸಾಧ್ಯವಿಲ್ಲ. ಉಳಿದ ಮೊತ್ತವನ್ನು ತನ್ನ ಮಕ್ಕಳಿಗೆ ಷೂ ಖರೀದಿಸಲು ಇಟ್ಟಿದ್ದಾಗಿ ತಿಳಿಸಿರುತ್ತಾರೆ. ಇದಕ್ಕೂ ಸಹ ಯಾವುದೇ ದಾಖಲೆಯನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಆರೋಪ ಸಾಬೀತಾಗಿದೆ.

- 3ನೇ ಆರೋಪಿ ಶ್ರೀ ಕೆ.ವೈ. ರಮೇಶ್, ಸಹಾಯಕರು ಅವರ ಬಳಿ ದೊರೆತ ರೂ. 77,830-00ಕ್ಕೆ ವಿವರಣೆ ನೀಡುತ್ತಾ, ತಮ್ಮ ಮಗಳನ್ನು ಕಂಪ್ಯೂಟರ್ ಸೈನ್ಸ್‌ನ 2ನೇ ಸೆಮೆಸ್ಟರ್‌ಗೆ ಸೇರಿಸುವ ಸಲುವಾಗಿ ತಮ್ಮ ಅಣ್ಣ ಯುನಾನಿ ಕಾಲೇಜಿನ ಅಧೀಕ್ಷಕರಾಗಿ ನಿವೃತ್ತಿ ಹೊಂದಿದ ನಂತರ ಬಂದ ಹಣದಲ್ಲಿ ರೂ. 75,000-00ನ್ನು ನೀಡಲು ಇಚ್ಛಿಸಿದ್ದು, ಅದನ್ನು ಮೂವರಿಂದ ಪಡೆದುಕೊಳ್ಳಲು ಹೇಳಿದ್ದರೆಂದು ಅದರಂತೆ ಅವರುಗಳಿಂದ ಪಡೆದುಕೊಳ್ಳಲಾಗಿತ್ತೆಂದು ತಿಳಿಸಿ ಉಳಿದ ರೂ. 2,830-00ಗಳನ್ನು ಪುಸ್ತಕಗಳ ಖರೀದಿಗಾಗಿ ತಮ್ಮ ಬಳಿ ಇಟ್ಟುಕೊಂಡಿದ್ದಾಗಿ ತಿಳಿಸಿದ್ದಾರೆ. ಅವರು ಹಾಜರ್ಪಡಿಸಿದ ಕಾಗದ ಪತ್ರಗಳು ಅವರ ಅಣ್ಣ ನಿವೃತ್ತಿ ಹೊಂದಿರುವುದನ್ನು ನಿರೂಪಿಸುತ್ತದೆ ಹೊರತು ಅವರು ಹಣ ಕೊಟ್ಟಿರುವುದನ್ನು ನಿರೂಪಿಸುವುದಿಲ್ಲ. ಆದ್ದರಿಂದ ಅವರ ವಿರುದ್ಧ ಆರೋಪ ಸಾಬೀತಾಗಿದೆ.

- 4ನೇ ಆರೋಪಿ ಶ್ರೀ ಶ್ರೀನಿವಾಸ್, ಕಿರಿಯ ಸಹಾಯಕ ಇವರ ಬಳಿ ದೊರೆತ ರೂ.3,600-00ಗಳಿಗೆ ವಿವರಣೆಯನ್ನು ನೀಡಿ 2 ರಾಷ್ಟ್ರೀಯ ಉಳಿತಾಯ ಪತ್ರಗಳು ದ್ವಿಗುಣಗೊಂಡು ಬಂದ ಮೊತ್ತ ಅದಾಗಿತ್ತೆಂದು ತಿಳಿಸಿರುತ್ತಾರೆ. ಅವರು ಹಾಜರ್ಪಡಿಸಿದ ರಶೀತಿಗಳನ್ನು ನೋಡಲಾಗಿ ಒಂದರಲ್ಲಿ ದಿನಾಂಕ 22-7-2006ರಂದು ರೂ. 2,852-00 ಪಡೆಯಲಾಗಿದೆ. ಇನ್ನೊಂದು ರೂ.870-00ಕ್ಕೆ ಕೌಂಟರ್ ಫೈಲ್ ಸಲ್ಲಿಸಿದ್ದು ಅದು ಮೈಸೂರು ಸಿಲ್ಕ್ ಕ್ಲಾತ್ ಮರ್ಚೆಂಟ್ಸ್ ಕೋ-ಆಪರೇಟಿವ್ ಸೊಸೈಟಿ ನೀಡಿದ್ದಾಗಿದೆ. ತಾವು 2005ರಲ್ಲಿ ಸದರಿ ಸೊಸೈಟಿಯಿಂದ ರೂ. 25,000-00 ಸಾಲ ಪಡೆದಿದ್ದು, ಅದರ ಮರುಪಾವತಿಗಾಗಿ ಸದರಿ ಮೊತ್ತವನ್ನು ಇಟ್ಟುಕೊಂಡಿದ್ದಾಗಿ ತಿಳಿಸಿರುತ್ತಾರೆ. ಹಾಗಿದ್ದಲ್ಲಿ ಸದರಿ ಮೊತ್ತವನ್ನು ದಾಳಿ ನಡೆದ ದಿನಾಂಕ 28-07-2006ರವರೆವಿಗೂ ಇಟ್ಟುಕೊಳ್ಳುವ ಅವಶ್ಯಕತೆ ಇರಲಿಲ್ಲ. ಏಕೆ ಇಟ್ಟುಕೊಂಡಿದ್ದರೆಂಬುದನ್ನು ಅವರು ಸಮರ್ಥವಾಗಿ ನಿರೂಪಿಸಿರುವುದಿಲ್ಲ. ಆದ್ದರಿಂದ ಅವರ ವಿರುದ್ಧ ಆರೋಪ ಸಾಬೀತಾಗಿದೆ.

ಮೇಲ್ಕಂಡ ವಿಚಾರಣಾ ವರದಿಯನ್ನು ಪರಾಮರ್ಶಿಸಿದ ಸನ್ಮಾನ್ಯ ಉಪ ಲೋಕಾಯುಕ್ತರು ಆರೋಪಿಗಳ ವಿರುದ್ಧ ವಿಚಾರಣಾಧಿಕಾರಿಗಳ ನಿರ್ಣಯಕ್ಕೆ ಸಮ್ಮತಿಸಿದರು ಹಾಗೂ ಮೇಲೆ (3)ರಲ್ಲಿ ಓದಲಾದ ದಿನಾಂಕದ 17-4-2008ರ ಪತ್ರದಲ್ಲಿ 2ನೇ ಆರೋಪಿ ಶ್ರೀ ಮುಖ್ತಾರ್‌ಪಾಷಾ, ಸಹಾಯಕರು ಅವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿಯಬೇಕೆಂದು, 3ನೇ ಆರೋಪಿ ಶ್ರೀ ಕೆ.ವೈ. ರಮೇಶ್, ಸಹಾಯಕರು ಅವರನ್ನು ಕಡ್ಡಾಯ ನಿವೃತ್ತಿಗೊಳಿಸಬೇಕೆಂದು ಹಾಗೂ 4ನೇ ಆರೋಪಿ ಶ್ರೀ ಶ್ರೀನಿವಾಸ, ಕಿರಿಯ ಸಹಾಯಕ ಅವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿಯಬೇಕೆಂದು ಶಿಫಾರಸ್ಸು ಮಾಡಿದರು.

ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸಿನ ಪ್ರತಿಗಳನ್ನು ಮೇಲೆ (4)ರಲ್ಲಿ ಓದಲಾದ ದಿನಾಂಕ 11-6-2008ರ ನೋಟೀಸ್‌ನ ಮೂಲಕ ಎಲ್ಲಾ ಆರೋಪಿಗಳಿಗೂ ಒದಗಿಸಲಾಯಿತು ಹಾಗೂ ಈ ವಿಷಯದಲ್ಲಿ ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಎಲ್ಲಾ ಆರೋಪಿಗಳು ಸಹ ಮೇಲೆ (5)ರಲ್ಲಿ ಓದಲಾದ ಉತ್ತರಗಳನ್ನು ಸಲ್ಲಿಸಿದ್ದಾರೆ.

- ತಮ್ಮ ಬಳಿ ದೊರೆತ ಮೊತ್ತವು ಕಛೇರಿಗೆ ಸಂಬಂಧಿಸಿದಂತೆ ಅಕ್ರಮವಾಗಿ ಗಳಿಸಿದ ಯಾವುದೇ ಹಣ ಆಗಿರಲಿಲ್ಲ ಹಣವನ್ನು ಡ್ರಾ ಮಾಡಿದ ಕುರಿತು ದಾಖಲೆಗಳನ್ನು ಸಲ್ಲಿಸಿದ್ದಾಗ್ಯೂ ಅದನ್ನು ಪರಿಗಣಿಸದಿರುವುದು ನ್ಯಾಯ ಸಮ್ಮತವಲ್ಲವೆಂದು 2ನೇ ಆರೋಪಿ ಶ್ರೀ ಮುಖ್ತಾರ್‌ಪಾಷಾ, ಸಹಾಯಕರು ನಿವೇದಿಸಿದ್ದಾರೆ.

- ತಮ್ಮ ಅಣ್ಣನ ಮಗನ ಮದುವೆಯ ಕಾರಣ ಅವರ ಸೂಚನೆಯ ಮೇರೆಗೆ ಅವರಿಂದ ಸಾಲ ಪಡೆದಿದ್ದ ವ್ಯಕ್ತಿಯು ನೀಡಿದ ಅಸಲು ಮತ್ತು ಬಡ್ಡಿ ಸೇರಿ ರೂ. 75,000-00ಗಳನ್ನು ಬ್ಯಾಂಕಿಗೆ ಜಮಾ ಮಾಡಲು ತರಲಾಗಿದ್ದು, ಅಂದು ಬ್ಯಾಂಕ್ ಮುಷ್ಕರವಿದ್ದ ಕಾರಣ ಜಮಾ ಮಾಡಲಿಲ್ಲ. ಇದನ್ನು ತಿಳಿಸಿದ್ದಾಗ್ಯೂ ಸಹ ತಮ್ಮ ವಿರುದ್ಧ ಅರೋಪ ಸಾಬೀತಾಗಿದೆಯೆಂದು ನಿರ್ಣಯಿಸಿರುವುದು ನ್ಯಾಯ ಸಮ್ಮತವಲ್ಲವೆಂದು 3ನೇ ಆರೋಪಿ ಶ್ರೀ ಕೆ.ವೈ. ರಮೇಶ್, ಸಹಾಯಕರು ನಿವೇದಿಸಿದ್ದಾರೆ.

- ತಮ್ಮ ದೈನಂದಿನ ವೆಚ್ಚಕ್ಕಾಗಿ ಹಬ್ಬಗಳಿಗಾಗಿ ಬಟ್ಟೆ ತೆಗೆದುಕೊಳ್ಳಲು ಇಟ್ಟಿರುವ ಮೊತ್ತವನ್ನೇ ಅಕ್ರಮ ಸಂಭಾವನೆಯೆಂದು ನಿರ್ಣಯಿಸಿರುವುದು ನ್ಯಾಯ ಸಮ್ಮತವಲ್ಲವೆಂದು 4ನೇ ಆರೋಪಿ ಶ್ರೀ ಶ್ರೀನಿವಾಸ, ಕಿರಿಯ ಸಹಾಯಕರು ತಿಳಿಸಿದ್ದಾರೆ. ಎಲ್ಲಾ ಆರೋಪಿಗಳು ಸಹ ಉಪಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಳ್ಳದೆ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

ಆರೋಪಿಗಳ ಉತ್ತರವನ್ನು ಪ್ರಕರಣದ ದಾಖಲೆಗಳೊಡನೆ ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪಲೋಕಾಯುಕ್ತರ ಶಿಫಾರಸ್ಸುಗಳ ನಡುವೆ ಸಮತೋಲನ ಸಾಧಿಸುವ ದಿಶೆಯಲ್ಲಿ ಪರಿಶೀಲಿಸಲಾಗಿದೆ. ಇದೊಂದು ವಿಶೇಷ ಪ್ರಕರಣವಾಗಿದ್ದು ಲಂಚ ಪಡೆಯುವಾಗ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿಬಿದ್ದ ಇಲ್ಲವೆ ಅಕ್ರಮ ಆಸ್ತಿ ಹೊಂದಿದ್ದಕ್ಕಾಗಿ ದಾಳಿ ನಡೆದ ಪ್ರಕರಣ ಇದಲ್ಲ. ಯಾವುದೇ ಅಧಿಕಾರಿ ಅಥವಾ ನೌಕರರು ತಮ್ಮ ಬಳಿ ಇಟ್ಟುಕೊಂಡಿರುವ ಹಣದ ಬಗ್ಗೆ ಕಛೇರಿಯಲ್ಲಿ ವಹಿ ನಿರ್ವಹಿಸುವ ಪದ್ಧತಿ ಇರುವುದಿಲ್ಲ. ಆರೋಪಿತ ಅಧಿಕಾರಿಗಳ ಬಳಿ ಇದ್ದ ಹಣ ಲಂಚದ ಮೂಲಕ ಪಡೆದ ಹಣವೆಂದು ನಿರ್ದಿಷ್ಟವಾಗಿ ಹೇಳಲು ಸಾಕ್ಷಿ ಅಥವಾ ಆಧಾರಗಳು ವಿಚಾರಣಾ ಅಧಿಕಾರಿಗಳು ನೀಡಿರುವುದಿಲ್ಲ. 3ನೇ ಆರೋಪಿ ಶ್ರೀ ಕೆ.ವೈ. ರಮೇಶ್ ಅವರ ಹತ್ತಿರ ದೊರೆತ ರೂ. 77,830–00ನ್ನು ಎಲ್ಲಾ ಆಪಾದಿತರು ಪರಸ್ಪರ ಹಂಚಿಕೊಳ್ಳಲು ವಸೂಲಿ ಮಾಡಿರುವ ಹಣವೆಂದು ನಿರ್ಣಯಕ್ಕೆ ಬಂದಿರುವುದು ಸರಿಯಲ್ಲ. ಏಕೆಂದರೆ ಈ ಆರೋಪ ದೋಷಾರೋಪಣಾ ಪಟ್ಟಿಯಲ್ಲಿ ಒಳಗೊಂಡಿರುವುದಿಲ್ಲ. ಆದಾಗ್ಯೂ ಲೋಕಾಯುಕ್ತದ ವತಿಯಿಂದ ಲೋಪವನ್ನು ಗುರುತಿಸಲಾಗಿದೆ. ಆದ್ದರಿಂದ ಆರೋಪಗಳು ಸಾಬೀತಾಗಿವೆ ಎಂಬುದಕ್ಕೆ ಸೀಮಿತಗೊಳಿಸಿದಂತೆ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡ ಸರ್ಕಾರವು ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 334 ಎಸ್ಇಎನ್ 2006, ಬೆಂಗಳೂರು ದಿನಾಂಕ 02ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಈ ಪ್ರಕರಣದ ಆರೋಪಿಗಳಿಗೆ ಈ ಕೆಳಕಂಡ ದಂಡನೆ ವಿಧಿಸಲಾಗಿದೆ.

ಅ) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ 2ನೇ ಆರೋಪಿ ಶ್ರೀ ಮುಖ್ತಾರ್‌ಪಾಷಾ, ಸಹಾಯಕರು ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ ತಡೆಹಿಡಿಯಲಾಗಿದೆ.

ಆ) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಾವಳಿ 1957ರ ನಿಯಮ 8(iv)(a)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ 3ನೇ ಆರೋಪಿ ಶ್ರೀ ಕೆ.ವೈ. ರಮೇಶ್, ಸಹಾಯಕರ ವೇತನವನ್ನು ಅವರ ವೇತನ ಶ್ರೇಣಿಯ ಕನಿಷ್ಠ ಮಟ್ಟಕ್ಕೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಎರಡು ವರ್ಷಗಳ ಅವಧಿಗೆ ಇಳಿಸುತ್ತದೆ. ಈ ಅವಧಿಯಲ್ಲಿ ಅವರು ಯಾವುದೇ ವಾರ್ಷಿಕ ವೇತನ ಬಡ್ತಿಯನ್ನು ಪಡೆಯುವುದಿಲ್ಲ. ಈ ದಂಡನೆಯು ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗಳನ್ನು ಮುಂದೂಡುವ ಪರಿಣಾಮ ಬೀರುತ್ತದೆ.

ಇ) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ 4ನೇ ಆರೋಪಿ ಶ್ರೀ ಶ್ರೀನಿವಾಸ, ಕಿರಿಯ ಸಹಾಯಕ ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ ತಡೆಹಿಡಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.199

*(ಎಂ.ಎಸ್. ಶಿವರಾಮ್)*
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಅನಧಿಕೃತ ಟಿಪ್ಪಣಿ

ಸಂಖ್ಯೆ : ಸಿಆಸುಇ 02 ರಾರಾಅ 2010, ಬೆಂಗಳೂರು, ದಿನಾಂಕ : 19–01–2010.

**ವಿಷಯ :** ಭಾರತದ ಸ್ವಾತಂತ್ರ್ಯಕ್ಕಾಗಿ ಪ್ರಾಣತೆತ್ತು ಹುತಾತ್ಮರಾದವರ ಸ್ಮರಣಾರ್ಥವಾಗಿ ಪ್ರತಿವರ್ಷ ಜನವರಿ 30ರಂದು ಮೌನ ಆಚರಿಸುವ ಬಗ್ಗೆ

**ಉಲ್ಲೇಖ :** ಇದೇ ಸಮಸಂಖ್ಯೆಯ ಅಧಿಕೃತ ಜ್ಞಾಪನಾ ದಿನಾಂಕ: 19–01–2010

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹುತಾತ್ಮರಾದವರ ಸ್ಮರಣಾರ್ಥವಾಗಿ ಪ್ರತಿವರ್ಷವೂ ಜನವರಿ 30ರಂದು ಶ್ರದ್ಧಾಂಜಲಿಯನ್ನು ಅರ್ಪಿಸುತ್ತೇವೆ. ಈ ಸಮಾರಂಭವನ್ನು ಆಚರಿಸುವ ಬಗ್ಗೆ ಸರ್ಕಾರವು ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುತ್ತದೆ. ದೇಶದ ಸ್ವಾತಂತ್ರ್ಯಕ್ಕಾಗಿ ಹುತಾತ್ಮರಾದವರ ಸ್ಮರಣಾರ್ಥವಾಗಿ ಈ ಸಮಾರಂಭವನ್ನು ಯಾವ ರೀತಿ ಆಚರಿಸಬೇಕೆಂದು ಉಲ್ಲೇಖಿತ ಅಧಿಕೃತ ಜ್ಞಾಪನದಲ್ಲಿ ಸೂಚನೆಗಳನ್ನು ನೀಡಲಾಗಿದೆ (ಪ್ರತಿಯನ್ನು ಲಗತ್ತಿಸಿದೆ). ಸದರಿ ಅಧಿಕೃತ ಜ್ಞಾಪನದಲ್ಲಿ ನೀಡಿರುವ ಸೂಚನೆಗಳನ್ನು

ಗಮನಿಸಿ ಅವುಗಳನ್ನು ದಿನಾಂಕ 30–01–2010ರ ಶನಿವಾರದಂದು ಕಡ್ಡಾಯವಾಗಿ ಪಾಲಿಸುವಂತೆ ಎಲ್ಲಾ ಜಿಲ್ಲಾಧಿಕಾರಿಗಳನ್ನು ಹಾಗೂ ಇಲಾಖಾ ಮುಖ್ಯಸ್ಥರುಗಳನ್ನು ಕೋರಲಾಗಿದೆ.

ಪಿ.ಆರ್.200

(ಬಿ.ವೀರಣ್ಣ)
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು.ಇ.(ರಾಜಕೀಯ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಅಧಿಕೃತ ಜ್ಞಾಪನ

ಸಂಖ್ಯೆ : ಸಿಆಸುಇ 02 ರಾರಾಆ 2010, ಬೆಂಗಳೂರು, ದಿನಾಂಕ : 19–01–2010.

**ವಿಷಯ :** ಭಾರತದ ಸ್ವಾತಂತ್ರ್ಯಕ್ಕಾಗಿ ಪ್ರಾಣತೆತ್ತು ಹುತಾತ್ಮರಾದವರ ಸ್ಮರಣಾರ್ಥವಾಗಿ ಪ್ರತಿವರ್ಷ ಜನವರಿ 30ರಂದು ಮೌನ ಆಚರಿಸುವ ಬಗ್ಗೆ

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಾಣತೆತ್ತು ಹುತಾತ್ಮರಾದವರ ಸ್ಮರಣಾರ್ಥವಾಗಿ ಪ್ರತಿವರ್ಷ ಜನವರಿ 30ರಂದು, ಪೂರ್ವಾಹ್ನ 11.00 ಘಂಟೆಗೆ ಎಲ್ಲಾ ಕೆಲಸ ಕಾರ್ಯಗಳನ್ನು ಹಾಗೂ ಚಲನೆಯನ್ನು ಸ್ಥಗಿತಗೊಳಿಸಿ ಮೌನ ಆಚರಿಸುವಾಗ ಅನುಸರಿಸಬೇಕಾದ ಕ್ರಮಗಳ ಬಗ್ಗೆ ಪ್ರತಿ ವರ್ಷವೂ ಸೂಚನೆಗಳನ್ನು ನೀಡಲಾಗುತ್ತಿದೆ. ಹುತಾತ್ಮರ ಸ್ಮರಣಾರ್ಥವಾಗಿ ಜನವರಿ 30ರಂದು ನಡೆಸುವ ಮೌನ ಆಚರಣೆಗೆ ಭಾರತ ಸರ್ಕಾರದ ಸೂಚನೆಗಳಂತೆ ಈ ಕೆಳಕಂಡಂತೆ ಪರಿಷ್ಕೃತ ಸ್ಥಾಯಿ ಸೂಚನೆಗಳನ್ನು ನೀಡಲಾಗಿದೆ.

1. ಜನವರಿ 30ರಂದು ಪೂರ್ವಾಹ್ನ 11.00 ಘಂಟೆಗೆ ರಾಜ್ಯದೆಲ್ಲೆಡೆ ಎಲ್ಲಾ ಕೆಲಸ ಕಾರ್ಯಗಳನ್ನು ಮತ್ತು ಚಲನೆಯನ್ನು ಸ್ಥಗಿತಗೊಳಿಸಿ 2 ನಿಮಿಷಗಳ ಕಾಲ ಮೌನ ಆಚರಿಸುವುದು.

2. ಎಲ್ಲಿ ಸೈರನ್‌ಗಳು ಅಥವಾ ಸೈನಿಕರ ಬಂದೂಕುಗಳು ಲಭ್ಯ ಇವೆಯೋ ಅಂತಹ ಕಡೆಗೆ ಎರಡು ನಿಮಿಷಗಳು ಮೌನ ಆಚರಣೆಯ ಕಾಲವನ್ನು ಪ್ರಾರಂಭ ಮತ್ತು ಮುಕ್ತಾಯಕ್ಕೆ ಸೈರನ್ ಅಥವಾ ಸೈನಿಕರ ಬಂದೂಕುಗಳ ಶಬ್ದದ ಮೂಲಕ ಎರಡು ನಿಮಿಷ ಮೌನ ಆಚರಣೆ ಪೂರ್ವಾಹ್ನ 10.59 ರಿಂದ 11.00 ಘಂಟೆಯವರೆಗೆ ಸೈರನ್ : ಬಂದೂಕು ಶಬ್ದಮಾಡಿಸುವುದು. ಹಾಗೂ ಎರಡು ನಿಮಿಷದ ಮೌನ ಆಚರಣೆ ನಂತರ ಪುನ: 11.02 ರಿಂದ 11.03 ನಿಮಿಷದವರೆಗೆ ಸೈರನ್ ಶಬ್ದವನ್ನು ಮಾಡಿಸುವುದು. ಈ ಪದ್ಧತಿಯನ್ನು ಸೈರನ್ ಸೌಲಭ್ಯವಿರುವ ಕಡೆ ಅಳವಡಿಸಿಕೊಳ್ಳುವುದು.

3. ಶಬ್ದವು (ಎಲ್ಲಿ ಲಭ್ಯ ಇದೆಯೋ ಅಲ್ಲಿ) ಕೇಳಿದ ಕೂಡಲೇ ಅಲ್ಲಿ ವ್ಯಕ್ತಿಗಳು ಆರಂಭದ ಸೂಚನೆಗಾಗಿ ನಿಂತುಕೊಳ್ಳಬೇಕು ಮತ್ತು ಮೌನವನ್ನು ಆಚರಿಸಬೇಕು. ಪ್ರತಿಯೊಬ್ಬ ವ್ಯಕ್ತಿಯು ತನ್ನ ಕೊಠಡಿಯಲ್ಲಿ ಅಥವಾ ಇತರೆ ಯಾವುದೇ ಸ್ಥಳದಲ್ಲಿ ನಿಂತುಕೊಂಡು ಮೌನ ಆಚರಿಸುವುದಕ್ಕಿಂತ, ಒಂದು ವೇಳೆ ವ್ಯಕ್ತಿಗಳು ಒಂದು ಸ್ಥಳದಲ್ಲಿ ಮೌನ ಆಚರಿಸಿದರೆ ಅದು ತುಂಬಾ ಪರಿಣಾಮಕಾರಿಯಾಗಿ ಮತ್ತು ಪ್ರಭಾವಕಾರಿ (effective and impressive) ಆಗುತ್ತದೆ. ಆದಾಗ್ಯೂ ಕೆಲಸ ಕಾರ್ಯಗಳಿಗೆ ತೀವ್ರ ತೊಂದರೆ ಆಗುವಂತೆ ಇದ್ದರೆ ಮೇಲೆ ತಿಳಿಸಿದಂತೆ ಒಂದೇ ಸ್ಥಳದಲ್ಲಿ ಸೇರಲು ಪ್ರಯತ್ನಿಸದೇ ಇರಬಹುದು. ಈ 2 ನಿಮಿಷದಲ್ಲಿ ಎಲ್ಲಾ ವರ್ಕ್‌ಶಾಪ್‌ಗಳು ಮತ್ತು ಕಾರ್ಖಾನೆಗಳು ಕೆಲಸ ಸ್ಥಗಿತಗೊಳಿಸಬೇಕು. ಈ 2 ನಿಮಿಷದ ಅವಧಿಯಲ್ಲಿ ವರ್ಕ್‌ಶಾಪ್‌ಗಳು ಕಾರ್ಖಾನೆಗಳು ಪ್ರಸಾರ ಮಾಡುವುದನ್ನು ನಿಲ್ಲಿಸಬೇಕು, ಮತ್ತು ರಸ್ತೆಗಳಲ್ಲಿ ಸಂಚಾರ ಸ್ಥಗಿತಗೊಳಿಸಬೇಕು. ವಿಮಾನಗಳು, ಹಡಗುಗಳು, ರೈಲುಗಳು ಹೊರಡಲು 11–00 A.M. ನಿಗಧಿಪಡಿಸಿದ್ದಲ್ಲಿ ಅಂತಹವುಗಳನ್ನು ಆಯಾ ನಿಲ್ದಾಣಗಳಲ್ಲಿ 2 ನಿಮಿಷಗಳು ತಡೆ ಹಿಡಿಯಬೇಕು.

4. ಸಂಕೇತ (Signal) ವ್ಯವಸ್ಥೆ ಇರದಂತಹ ಪ್ರದೇಶದಲ್ಲಿ 11–00 A.M. ಗೆ 2 ನಿಮಿಷಗಳ ಮೌನ ಆಚರಿಸಲು ಸಂಬಂಧಪಟ್ಟವರಿಗೆಲ್ಲ ಸೂಕ್ತ ನಿರ್ದೇಶನವನ್ನು ಕಳುಹಿಸುವುದು.

5. ಇಲಾಖಾ ಮುಖ್ಯಸ್ಥರು ಮತ್ತು ಜಿಲ್ಲಾಧಿಕಾರಿಗಳು ವಿವರವಾದ ಕಾರ್ಯಕ್ರಮಗಳನ್ನು ರೂಪಿಸುವ ಸಂಪೂರ್ಣ ಜವಾಬ್ದಾರಿಯುಳ್ಳವರಾಗಿರುತ್ತಾರೆ (dis-oreation) 10-44 A.M. ರಿಂದ 10–56 A.M. ರವರೆಗೆ (1) " ಸುಮಿರನ ಕರಲೆ ಮೇರೆ ಮನ್" (2) "ವೈಷ್ಣವೋ ಜನತೋ ತೇನೇ ಕಹಿಯೇ" ಮತ್ತು "ರಘುಪತಿ ರಾಘವ ರಾಜಾರಾಂ" ಈ ಕ್ರಮದಲ್ಲಿ 3 ಭಜನೆಗಳನ್ನು ಹಾಡಬೇಕು ಮತ್ತು ಈ ಕಾರ್ಯಕ್ರಮವು ಸಮಾರಂಭದ ಭಾಗ ಆಗಬಹುದು.

6. ಶಬ್ದ ಮಾಡುವ ಬಗೆ ಬಂದೂಕು ಹೊಡೆಯುವುದರಿಂದ ಅಥವಾ Siron ಗಳನ್ನು ಬೆಂಗಳೂರಿನಲ್ಲಿ ಮತ್ತು ಜಿಲ್ಲಾ ಕೇಂದ್ರಗಳಲ್ಲಿ ಮತ್ತು ಇತರ ನಗರ ಪಟ್ಟಣಗಳಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಸೂಕ್ತ ವ್ಯವಸ್ಥೆಗಳನ್ನು ಕರ್ನಾಟಕ ರಾಜ್ಯದ ಆರಕ್ಷಕ ಮಹಾನಿರೀಕ್ಷಕರು ಕ್ರಮ ತೆಗೆದುಕೊಳ್ಳುವುದು.

2. ಕೆಲವು ಕಚೇರಿಗಳಲ್ಲಿ ಈ 2 ನಿಮಿಷಗಳ ಮೌನ ಆಚರಣೆಯನ್ನು ಮಾಡುತ್ತಿರುವಾಗ ಸಾಮಾನ್ಯ ಜನತೆ ಈ ಮೌನ ಆಚರಣೆ ಸಂದರ್ಭದ ಪಾವಿತ್ರ್ಯತೆಯನ್ನು ಗಮನದಲ್ಲಿ ಇಡದೇ ತನ್ನ ಕಾರ್ಯದಲ್ಲಿ ನಿರತವಾಗುವುದನ್ನು ಗಮನಿಸಲಾಗಿದೆ. ಆದುದರಿಂದ ಹುತಾತ್ಮರ ದಿನಾಚರಣೆಯ ಸೂಕ್ತವಾಗಿ ಸಲ್ಲಿಸಬೇಕಾದ ಪಾವಿತ್ರ್ಯತೆ ಮತ್ತು ಸಾಮಾನ್ಯ ಜನತೆಯು ಭಾಗವಹಿಸುವುದರೊಡನೆ ಈ ಹುತಾತ್ಮರ ದಿನಾಚರಣೆಯನ್ನು ತಪ್ಪದೇ ಆಚರಿಸಬೇಕಾಗಿರುವ ಎಲ್ಲಾ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೆಂದು ಸಂಬಂಧಪಟ್ಟ ಎಲ್ಲಾ ಪ್ರಾಧಿಕಾರಗಳಿಗೆ ಸೂಚಿಸಲಾಗಿದೆ. ಈ ಉದ್ದೇಶಕ್ಕಾಗಿ ಕೆಳಕಂಡ ಕ್ರಮಗಳನ್ನು ಕೈಗೊಳ್ಳಬೇಕೆಂದು ಕೋರಲಾಗಿದೆ.

1. ಹುತಾತ್ಮರ ದಿನವನ್ನು ಪೂರ್ಣ ಪಾವಿತ್ರ್ಯತೆ ಮತ್ತು ತಕ್ಕುದಾದ (befitting) ರೀತಿಯಲ್ಲಿ ಆಚರಿಸಲು ರಾಜ್ಯದ ಎಲ್ಲಾ ವಿದ್ಯಾ ಸಂಸ್ಥೆಗಳಿಗೆ ಸೂಚನೆಗಳನ್ನು ನೀಡುವುದು. ಈ ದಿನದ ವಿಶೇಷತ್ವಕ್ಕೆ (significance) ಸಂಬಂಧಿಸಿದಂತೆ ಭಾಷಣಗಳನ್ನು, ಅದರಲ್ಲೂ ವಿಶೇಷವಾಗಿ ಭಾರತದ ಸ್ವಾತಂತ್ರ್ಯದಲ್ಲಿ ಸ್ವಾತಂತ್ರ್ಯ ಹೋರಾಟಗಾರರ ಪಾತ್ರವನ್ನು ತಿಳಿಸುವಂತಹ ಭಾಷಣಗಳನ್ನು ಚರ್ಚೆಗಳನ್ನು (talks) ಏರ್ಪಡಿಸಬೇಕು. ಈ ಭಾಷಣಗಳ ಮುಖ್ಯಾಂಶಗಳಲ್ಲಿ ಕಷ್ಟಪಟ್ಟು ಗಳಿಸಿದ ಸ್ವಾತಂತ್ರ್ಯವನ್ನು ಉಳಿಸುವುದು, ಸಂರಕ್ಷಿಸುವುದು ಮತ್ತು ಶ್ರೀಮಂತಗೊಳಿಸುವುದಲ್ಲದೆ ರಾಷ್ಟ್ರದ ಐಕ್ಯತೆಯನ್ನು ಉತ್ತೇಜಿಸುವುದು (promote) ಮತ್ತು ಒಂದೇ ಗುರಿಗಳು ಮತ್ತು ಆದರ್ಶಗಳಿಗೆ (ideal) ಬದ್ಧರಾಗುವ ಅಂಶಗಳನ್ನೊಳಗೊಂಡಿರಬೇಕು.

2. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಹುತಾತ್ಮರಾದವರ ಪಾತ್ರ ಮತ್ತು ರಾಷ್ಟ್ರೀಯ ಐಕ್ಯತೆಯ (National Integration) ಮೂಲ ಉದ್ದೇಶಗಳು ಇರುವ ಸಾಂಸ್ಕೃತಿಕ ಕಾರ್ಯಕ್ರಮಗಳು Documentary ಚಿತ್ರಗಳ ಪ್ರದರ್ಶನ : ಏರ್ಪಾಡುಗಳನ್ನು ರಾಜ್ಯದ ಪ್ರಚಾರ ಘಟಕಗಳು ಮಾಡಬಹುದು.

3. ಹುತಾತ್ಮರ ದಿನಾಚರಣೆಯನ್ನು ಸೂಕ್ತವಾಗಿ ಆಚರಿಸುವ ಬಗ್ಗೆ ತಮ್ಮ ಸದಸ್ಯರು ಹಾಗೂ ಸಂಯೋಜಿತ ಸಂಘ ಸಂಸ್ಥೆಗಳು ಹುತಾತ್ಮರ ದಿನಾಚರಣೆಯನ್ನು ಖಾತ್ರಿಯಾಗಿ ಸೂಕ್ತವಾಗಿ ಆಚರಿಸಬೇಕೆಂದು Chamber of Commerce ಮತ್ತು ಕೈಗಾರಿಕೆಗಳನ್ನು ಕೋರಬಹುದು.

3. ಸರ್ಕಾರದ ಎಲ್ಲಾ ಪ್ರಧಾನ ಕಾರ್ಯದರ್ಶಿಗಳು, ಕಾರ್ಯದರ್ಶಿಗಳು, ಎಲ್ಲಾ ಪ್ರಾದೇಶಿಕ ಆಯುಕ್ತರು, ಇಲಾಖಾ ಮುಖ್ಯಸ್ಥರು ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು ಮತ್ತು ಮತ್ತಿತರೆ ಸಂಬಂಧಪಟ್ಟ ಅಧಿಕಾರಿಗಳು ಮೇಲೆ ಸೂಚಿಸಿರುವ ನಿರ್ದೇಶನಗಳನ್ನು ತಕ್ಕುದಾದ ರೀತಿಯಲ್ಲಿ ಅನುಸರಿಸಲು ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಕೋರಲಾಗಿದೆ.

**(ಬಿ.ವೀರಣ್ಣ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು.ಇ.(ರಾಜಕೀಯ)

**Forest, Ecology and Environment Secretariat**

**Sub :** Diversion of 5.926 ha. Of forest land in Sirsi Division, Uttara Kannada district for the purpose of road Widening from Yellapur to Sirsi in favour of Executive Engineer, Karnataka State Highway Improvement Project Division, Yellapur.

**Read :**
1. Letter No.A5(2)GFL. CR.8/05-06, Dated: 09-01-2006 of Principal Chief Conservator of Forests, Bangalore.
2. State Government letter No. FEE 12 FLL 2006, dated : 07-02-2006.
3. Letter No. 4-KRC 171/2006/BAN/1612,dated : 07-01-2008 of Government of India, Ministry of Environment and Forests, Regional Office, Southern Zone, Bangalore.
4. Letter No. A5(2)GFL.CR.8/05-06, Dated : 02-06-2008 of Principal Chief Conservator of Forests, Bangalore.
5. State Government letter No. FEE 12 FLL 2006, dated : 06-10-2008.
6. Letter No. 4-KRC 171/2006-BAN/6071, dated : 18-11-2009 of Government of India, Ministry of Environment and Forests, Regional Office, Southern Zone, Bangalore.

**Preamble:**

The Principal Chief Conservator of Forests, Bangalore vide his letter dated : 09-01-2006 read at (1) above has submitted the proposal to obtain the approval of Government of India under Section 2 of the Forest (Conservation) Act, 1980 for diversion of 5.926 ha. of forest land in Sirsi Division, Uttara Kannada District for the purpose of road widening from Yellapur to Sirsi in favour of Executive Engineer, Karnataka State Highway Improvement Project Division, Yellapur subject to certain conditions.

Accordingly the proposal was recommended to Government of India vide State Government letter dated : 07-02-2006 read at (2) above.

The Government of India, Ministry of Environment and Forests, Regional Office, Bangalore vide their letter dated 07-01-2008 read at (3) above has given its approval in Principle (Stage-I) for diversion of 5.926 ha. Of forest land in Sirsi Division, Uttara Kannada District for the purpose of road widening from Yellapur to Sirsi in favour of Executive Engineer, Karnataka State Highway Improvement Project Division, Yellapur subject to fulfilment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated 02-06-2008 furnished the compliance report read at (4) above and the same has been sent to Government of India vide State Government letter dated : 06-10-2008 read at (5) above.

Government of India Ministry of Environment and Forests, Regional Office, South Zone, Bangalore vide their letter dated 18-11-2009 read at (6) above has conveyed its approval (Stage-II) under Section 2 of the Forest (Conservation) Act, 1980 for diversion of 5.926 ha. of forest land in Sirsi Division, Uttara Kannada District for the purpose of road widening from Yellapur to Sirsi in favour of Executive Engineer, Karnataka State Highway Improvement Project Division, Yellapur subject to certain conditions.

The proposal has been examined in detail and hence the order.

**Government Order No. FEE 197 FLL 2009, Bangalore, Dated : 16th January 2010**

In the circumstances explained in the preamble above, Government are pleased to accord sanction under Section 2 of the Forest (Conservation) Act, 1980 for diversion of 5.926 ha. of forest land in Sirsi Division, Uttara Kannada District for the purpose of road widening from Yellapur to Sirsi in favour of Executive Engineer, Karnataka State Highway Improvement Project Division, Yellapur subject to the following conditions.

1. The legal Status of the forest land shall remain unchanged.
2. The Compensatory afforestation shall be raised over double the extent (11.852 ha) of degraded forest land at the cost of user agency.
3. Avenue plantation shall be raised on either side of the road at the cost of user agency.
4. The additional amount of the Net Present Value (NPV) of the diverted forest land, if any, due as per the orders of the Hon'ble Supreme Court of India dated : 28-03-2008 and 09-05-2008 in IA Nos. 826 in 566 with related IA's in Writ Petition (Civil) No. 202/1995 shall be realised from the user agency and transferred to Ad-hoc CAMPA in account number CA-1582 of Corporation Bank, Block-II, CGO Complex, Phase-I, Lodhi Road, NewDelhi-110 003.
5. The total forest area utilised for the project shall not exceed 5.926 ha. and it shall be used only for the purpose for which it is diverted. In case the land is not used for the stipulated purpose within 5 years or ; when it is no longer needed for the said purpose, then the area will be resumed by the Forest Department.
6. The lease is in perpetual basis.
7. If the land is not required for the purpose for which it is granted the same should be resumed back to the Forest Department by the Deputy Conservator of Forests under section 82 of the Karnataka Forest Act 1963.

| | | |
|---|---|---|
| | in this appeal. However, so as to analyse the findings on charges No. 1 and 2, it is better to observe the clear findings made by the Inquiry Authority on charges No. 3 to 6. When charges Nos. 3 to 6 are held to be not proved, the charges No. 1 and 2 based on other charges cannot held to be proved. | |
| Para 10 | Infact, there was no necessity to initiate disciplinary proceedings against me when I was working as Head of the Department. It is on my complaint dated: 20-2-2001, a police investigation is conducted. As a Director, by letter dated: 1-3-2001 a report is given to the Government based on which AGO-3 was suspended and ultimately even in Inquiry, Smt. Jalajakshi is held to be responsible for many irregularities. Therefore, your kind Excellency may find that for the faithful work of the Government and my honesty, I am included In the Disciplinary proceedings. However, since I was working as a Director of Treasuries, I was one of the relevant witnesses, but can never be an accused. I have been included in the Inquiry at the fag end of my service, just to harass me in the retired life. There is no charge of any misappropriation of Government funds against me. I am intentionally fixed in the Inquiry without justifiable reasons and therefore punishment order is liable to be set aside. The Inquiry was started on 28-1-2004 and I have retired from service on 31-10-2004. Under the circumstances, the Inquiry against me itself is perverse and I am very much suffering in the retired life without getting any financial benefits due to my retirement. I am deprive of completion of my responsibility in the life towards my dependents. Now, there is an order of recovery of huge amount from my retirement benefits and also pension. If the impugned order allowed to be implemented, I will be put to great injustice, financial loss as well as mental agony which cannot be compensated in any terms. I have worked in the Government with all honesty in my entire service and there is no adverse remark in my service. If the above wrongful punishment order is not set aside, I will be put to unnecessary and avoidable mental agony. | Contention of the Appellant is not correct. When he himself is a party to the negligence, dereliction of duty resulting in wrong payment, he cannot claim to be innocent stating that he submitted report to Government, he lodged Police Complaint. |
| Para 11 | I further beg to submit that the Hon'ble High Court of Karnataka in **M. Munivenkatappa Vs The State of Karnataka and Others (ILR 2007 Kar. 626) has held thus;**<br>"17. Finally the respondent's endeavour to sustain the argument that a conjoint reading of Rule 8 (iv) of the Karnataka Civil Services (Classification, Control and Appeal) Rules, 1957 and Rule 214 of the Karnataka Civil Services Rules would enable the second respondent to recover any pecuniary loss to the Corporation, on account of an ex-employee's misconduct, from pensionary or terminal benefits due to him cannot be accepted. The express language of the Rules cannot be read in the fushion as suggested, only in order to enable the second respondent to recover the sums due from an employee who is no longer in service. This would result in this court clothing the second respondent with a power that is not expressly provided under the Rules. In the absence of a clear and categorical Rule under which such power could | In this para the citation quoted by the Appellant would not apply to this case. In the case relied on by the Appellant the power of the Corporation to recover loss from its ex-employees terminal benefits under rules applicable to Government servants is examined. But in the instant case the appellant is a Government servant for whom these rules apply in Toto. Therefore, the case has no relevance here. |

| | | |
|---|---|---|
| | be exercised, it is for the respondent to have recource to a civil suit for recovered of money. The second respondent is therefore no justified in with-holding the pensionary benefits or proceeding to recover any amounts found due by recourse to an involved interpretation of the existing Rules. The petition deserves to be allowed in this regard".<br>"18. Accordingly the petition is allowed. Annexure-K' is quashed in so far as it relates to the petitioner. The respondents shall release the retirement benefits due to the petitioner within a period of six weeks from the date of receipt of a certified copy of this order". | |
| Para 12 | Relying on the ratio decided by the Hon'ble High Court of Karnataka in the case mentioned above, the impugned order dated: 3-5-2008 passed by the Government directing recovery from the pensionary benefits and the reduction in pension is unsustainable in the eye of law and is thus liable to be set aside. | The order dated: 3-5-2008 is in accordance with Law. It is legally valid. |
| Para 13 | Therefore, the hands of justice, it requires that the punishment order imposed by the disciplinary authority be declared as null and void by setting aside the same at the hands of your kind Excellency. | Remarks furnished to above para hold good here also. |

ಮೇಲ್ಕಂಡ ವಾಸ್ತವಾಂಶಗಳನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರವಾದ ಘನತೆವೆತ್ತ ರಾಜ್ಯಪಾಲರು ಈ ಮುಂದಿನಂತೆ ಆದೇಶಿಸಿದ್ದಾರೆ.

**ಆದೇಶ ಸಂ. ಸಿಆಸುಇ 28 ಇಮುವಿ 2008, ಬೆಂಗಳೂರು, ದಿನಾಂಕ 18ನೇ ಜನವರಿ, 2010**

I have considered the appeal petition submitted under rule 18 of KCS (CCA) Rules, 1957 by Sri K.K. Nayak, Retired Director of Treasuries against the Government Order No. DPAR 5 SEN 2001, dated: 3rd May, 2008 imposing the penalty of recovery of Rs. 2,29,385/- with 8% interest being the loss caused to Government attributable to him and withholding of Rs. 500/- from his pension for a period of 2 (two) years, in the light of the contention raised in the appeal petition and on perusal of the connected inquiry and appeal records.

The charges framed against the A.G.O. that while he was working as Director of treasuries had sanctioned refund of Rs. 1,87,000/- House Building Advance from HDFC Account to the loanees without authority and issued open cheques for a total amount of Rs. 1,32,473/- to individual persons in seven cases without crossing them with "Account Payee" seal, in violation of Article 74 (A) of the KFC 1957, have been proved in the inquiry.

The contentions of the appellant that joint enquiry was conducted without specific Government Order and that the other DGOs. are not punished equally and that there are no direct charge of misappropriation against him and no documents/evidence are adduced to prove his involvement in the case, etc., do not merit consideration.

In the circumstances, after duly considering the entire matter, I dismiss the appeal petition and uphold the orders of the Disciplinary Authority.

**H.R. BHARDWAJ**
Governor of Karnataka

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು–3)

ಪಿ.ಆರ್. 224

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಡಾ: ಎಂ.ಕೆ. ಬಿಂದುರಾಣಿ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೊಳಾಲ, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ : ಜೆಆರ್‌ಒ(1)/238/2008–09 ದಿನಾಂಕ : 21–10–2008 ಮತ್ತು 20-03–2009

**ಪ್ರಸ್ತಾವನೆ :**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ ಡಾ: ಎಂ.ಕೆ. ಬಿಂದುರಾಣಿ, ಇವರು ದಿನಾಂಕ : 15–02–2008 ರಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ಸೇವೆಗೆ ಸೇರಿದ್ದು, ಸ್ನಾತಕೋತ್ತರ ವ್ಯಾಸಾಂಗ ನಡೆಸುವ ಹಿನ್ನೆಲೆಯಲ್ಲಿ, ದಿನಾಂಕ : 23–06–2008 ರಿಂದ ಒಪ್ಪಿಕೊಳ್ಳುವಂತೆ ಕೋರಿ ರಾಜೀನಾಮೆಯನ್ನು ಸಲ್ಲಿಸಿರುತ್ತಾರೆ. ಇವರ ವಿರುದ್ಧ ಇಲಾಖಾ ವಿಚಾರಣೆ ಇರುವುದಿಲ್ಲ ಹಾಗೂ ಬಾಂಡ್ ಅವಧಿಯಲ್ಲಿ ಇರುವುದಿಲ್ಲವಾದ್ದರಿಂದ ದಿನಾಂಕ : 23–06–2008 ರಿಂದ ಜಾರಿಗೆ ಬರುವಂತೆ ವೈದ್ಯರ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 126 ಹೆಚ್‌ಎಸ್‌ಹೆಚ್ 2009, ಬೆಂಗಳೂರು, ದಿನಾಂಕ: 18ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 252(ಎ) ರನ್ವಯ ಡಾ: ಎಂ.ಕೆ. ಬಿಂದುರಾಣಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೊಳಾಲ, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ ಇವರು ನೀಡಿರುವ ರಾಜೀನಾಮೆಯನ್ನು ದಿನಾಂಕ : 23–06–2008 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಐ. ಹೇಮನಾಥ್)**

ಪಿ.ಆರ್.225

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** 'ಆಯುರ್ವೇದ, ಯೋಗ ಮತ್ತು ನ್ಯಾಚುರೋಪತಿ, ಯುನಾನಿ, ಸಿದ್ಧ ಮತ್ತು ಹೋಮಿಯೋಪತಿ (ಆಯುಷ್) ನಿರ್ದೇಶನಾಲಯ'ಎಂಬ ಹೆಸರನ್ನು "ಆಯುರ್ವೇದ, ಯೋಗ ಮತ್ತು ನ್ಯಾಚುರೋಪತಿ, ಯುನಾನಿ, ಸಿದ್ದ ಮತ್ತು ಹೋಮಿಯೋಪತಿ (ಆಯುಷ್) ಇಲಾಖೆ" ಎಂದು ಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ : ಆಕುಕ 07 ಪಿಐಎಂ 2005, ದಿನಾಂಕ : 15–12–2005.

(2) ನಿರ್ದೇಶಕರು ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ದಿನಾಂಕ : 10–09–2009 ಮತ್ತು 22–10–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1) ರಲ್ಲಿನ ಸರ್ಕಾರದ ಆದೇಶದಲ್ಲಿ, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶನಾಲಯದ ಹೆಸರನ್ನು 'ಆಯುರ್ವೇದ, ಯೋಗ ಮತ್ತು ನ್ಯಾಚುರೋಪತಿ, ಯುನಾನಿ, ಸಿದ್ದ ಮತ್ತು ಹೋಮಿಯೋಪತಿ (ಆಯುಷ್) ನಿರ್ದೇಶನಾಲಯ' ಎಂದು ಮರುಪದನಾಮೀಕರಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರ.ಸಂ. (2) ರಲ್ಲಿನ ಪತ್ರಗಳಲ್ಲಿ, ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರು ಉಲ್ಲೇಖ (1) ರಲ್ಲಿನ ಸರ್ಕಾರದ ಆದೇಶದಂತೆ ಮರುಪದನಾಮೀಕರಣವು ಇಲಾಖೆಯ ನಿರ್ದೇಶನಾಲಯಕ್ಕೆ ಮಾತ್ರ ಸೀಮಿತವಾಗಿರುವುದರಿಂದ, ಭಾರತ ಸರ್ಕಾರದ ಅಧಿಸೂಚನೆ ಸಂಖ್ಯೆ : 1/22/1/2003–ಸಿಎಬಿ.(1) ದಿನಾಂಕ : 11–11–2003 ರಲ್ಲಿ ಸೂಚಿಸಿರುವಂತೆ, ಉಲ್ಲೇಖ (1) ರಲ್ಲಿನ ಸರ್ಕಾರದ ಆದೇಶ ಸಂಖ್ಯೆ : ಆಕುಕ 07 ಪಿಐಎಂ 2005, ದಿನಾಂಕ : 15-12–2005ನ್ನು ಭಾಗಶಃ ಪರಿಷ್ಕರಿಸಿ ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯ ಹೆಸರನ್ನು "ಆಯುರ್ವೇದ, ಯೋಗ ಮತ್ತು ನ್ಯಾಚುರೋಪತಿ, ಯುನಾನಿ, ಸಿದ್ದ ಮತ್ತು ಹೋಮಿಯೋಪತಿ (ಆಯುಷ್) ಇಲಾಖೆ" ಎಂದು ಮರುಪದನಾಮೀಕರಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 381 ಪಿಐಎಂ 2009, ಬೆಂಗಳೂರು, ದಿನಾಂಕ: 11ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 'ಆಯುರ್ವೇದ, ಯೋಗ ಮತ್ತು ನ್ಯಾಚುರೋಪತಿ, ಯುನಾನಿ, ಸಿದ್ದ ಮತ್ತು ಹೋಮಿಯೋಪತಿ (ಆಯುಷ್) ನಿರ್ದೇಶನಾಲಯ' ಎಂಬ ಹೆಸರನ್ನು "ಆಯುರ್ವೇದ, ಯೋಗ ಮತ್ತು ನ್ಯಾಚುರೋಪತಿ, ಯುನಾನಿ, ಸಿದ್ದ ಮತ್ತು ಹೋಮಿಯೋಪತಿ (ಆಯುಷ್) ಇಲಾಖೆ" ಎಂಬುದಾಗಿ ಮಾರ್ಪಡಿಸಲಾಗಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–3) ಇವರ ಟಿಪ್ಪಣಿ ಸಂಖ್ಯೆ: ಸಿಆಸುಇ 101 ಸೇನಿಡಿ 2009, ದಿನಾಂಕ : 14–12–2009ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್.226

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ : ಆಕುಕ 9 ಎಂಎಂಸಿ 2010, ಬೆಂಗಳೂರು, ದಿನಾಂಕ : 22ನೇ ಜನವರಿ 2010**

ಸರ್ಕಾರದ ಆದೇಶ ಸಂಖ್ಯೆ : ಆಕುಕ 395 ಎಂಎಂಸಿ 2007, ದಿನಾಂಕ : 06-01–2010ರ ಅನುಬಂಧ–1ರ ಅಂಕಣ 7 ರಲ್ಲಿ **"ಸಹಾಯಕ ಪ್ರಾಧ್ಯಾಪಕರಾಗಿ ವೃಂದ ಬದಲಾವಣೆ ಮಾಡಿ ಖಾಲಿ ಇರುವ ಹುದ್ದೆಗೆ"** ಎಂಬ ಪದಗಳನ್ನು ಕೈಬಿಟ್ಟು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀರಾಮರೆಡ್ಡಿ**

ಪಿ.ಆರ್.227

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** 2005–06ನೇ ಸಾಲಿನಲ್ಲಿ ಸ್ನಾತಕ ವೈದ್ಯಕೀಯ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಕಇ 410 ಪಕವಿ 2004, ದಿನಾಂಕ : 14-06-2005-70
2. ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 1 ಎಂಪಿಎಸ್ 2005, ದಿನಾಂಕ : 19–07–2005
3. ಸರ್ಕಾರದ ಆದೇಶ ಸಂಖ್ಯೆ : ಆಕುಕ 150 ಎಂಪಿಎಸ್ 2006 (ಭಾಗ), ದಿನಾಂಕ 19–09–2006
4. ಸರ್ಕಾರದ ಆದೇಶ ಸಂಖ್ಯೆ : ಆಕುಕ 150 ಎಂಪಿಎಸ್ 2006 (ಭಾ–1), ದಿನಾಂಕ : 02–01–2007 ಮತ್ತು ತಿದ್ದುಪಡಿ ದಿನಾಂಕ : 12–01–2007
5. ಸರ್ಕಾರದ ಆದೇಶ ಸಂಖ್ಯೆ : ಸಕಇ 410 ಪಕವಿ 2004 (ಭಾಗ), ದಿನಾಂಕ : 14–02–2007
6. ಪತ್ರ ಸಂಖ್ಯೆ : ನಿವೈಶಿ : ಎಂಇಎಸ್ : 10:2006–07, ದಿನಾಂಕ : 24–01–2007
7. ಪತ್ರ ಸಂಖ್ಯೆ : ಎಂಇಎಸ್ 10 : 2006–2007, ದಿನಾಂಕ : 10–08–2007
8. ಪತ್ರ ಸಂಖ್ಯೆ : ಎಂಇಎಸ್ 168/2007–2008, ದಿನಾಂಕ : 20–03–2008
9. ಪತ್ರ ಸಂಖ್ಯೆ : ಎಂಇಎಸ್/168–2007–2008, ದಿನಾಂಕ : 07–01–2009

10. ಪತ್ರ ಸಂಖ್ಯೆ : ಎಂಇಎಸ್/138/2008-09, ದಿನಾಂಕ : 27-06-2009
11. ಶ್ರೀ ವೈ.ಆರ್. ಮಂಜುನಾಥ ಬಾಬು ಇವರ ಪತ್ರ ದಿನಾಂಕ : 03-10-2008, ದಿನಾಂಕ : 24-07-2009 ಮತ್ತು ದಿನಾಂಕ : 26-10-2009
12. ಸರ್ಕಾರದ ಪತ್ರ ಸಂಖ್ಯೆ : ಆಕುಕ 171 ಎಂಪಿಎಸ್ 2009, ದಿನಾಂಕ : 02-12-2009
13. ಪತ್ರ ಸಂಖ್ಯೆ : ಎಂಇಎಸ್/168/2007-08, ದಿನಾಂಕ : 03-12-2009
14. ಸರ್ಕಾರದ ಪತ್ರ ಸಂಖ್ಯೆ : ಆಕುಕ 171 ಎಂಪಿಎಸ್ 2009, ದಿನಾಂಕ : 10-12-2009
15. ಪತ್ರ ಸಂಖ್ಯೆ : ಎಂಇಎಸ್/168/2007-08, ದಿನಾಂಕ : 16-12-2009

**ಪ್ರಸ್ತಾವನೆ :**

2005-06ನೇ ಸಾಲಿಗೆ ವೃತ್ತಿಪರ ಕಾಲೇಜುಗಳಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ವಿದ್ಯಾರ್ಥಿಗಳ ಪ್ರವೇಶಾತಿಗೆ ಮೀಸಲಾತಿ ರೋಸ್ಟರ್ ಪದ್ಧತಿಯನ್ನು ಸರ್ಕಾರಿ ಖಾಸಗಿ ಅನುದಾನಿತ ಹಾಗೂ ಖಾಸಗಿ ಅನುದಾನ ರಹಿತ ವೃತ್ತಿಪರ ಕಾಲೇಜುಗಳಲ್ಲಿನ ಎಲ್ಲಾ ಸರ್ಕಾರಿ ಸೀಟುಗಳಿಗೆ ಅನ್ವಯಿಸತಕ್ಕದ್ದೆಂದು, 2005-06ನೇ ಸಾಲಿನಲ್ಲಿ ಕ್ಯಾಟಗರಿ-ಎ (ಲೋಯರ್ ಫೀ) ಸೀಟುಗಳಲ್ಲಿ ಪ್ರವೇಶಾತಿ ಹೊಂದಿದ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ವಿದ್ಯಾರ್ಥಿಗಳಿಗೆ ಯಾವುದೇ ಆದಾಯ ಮಿತಿ ಇಲ್ಲದೆ ಶೇ. 100 ರಷ್ಟು ಬೋಧನಾ ಶುಲ್ಕ ಮರುಪಾವತಿ ಮಾಡತಕ್ಕದ್ದೆಂದು ಮತ್ತು 2005-06ನೇ ಸಾಲಿಗೆ ಕ್ಯಾಟಗರಿ-ಬಿ (Higher Fee) ಸೀಟುಗಳಲ್ಲಿ ಪ್ರವೇಶಾತಿ ಪಡೆದ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ವಿದ್ಯಾರ್ಥಿಗಳಿಗೆ ವಾರ್ಷಿಕ ಆದಾಯ ರೂ. 1.00 ಲಕ್ಷಕ್ಕಿಂತ ಕಡಿಮೆ ಇರುವ ವಿದ್ಯಾರ್ಥಿಗಳ ಬೋಧನಾ ಶುಲ್ಕದಲ್ಲಿ ಶೇ. 60 ರಷ್ಟು ಮರುಪಾವತಿಸುವುದು ಉಳಿದ ಶೇ. 40 ರಷ್ಟು ಬೋಧನಾ ಶುಲ್ಕವನ್ನು ವಿದ್ಯಾರ್ಥಿಗಳು ಭರಿಸತಕ್ಕದ್ದು ಹಾಗೂ ಈ ಶುಲ್ಕವನ್ನು ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕದಿಂದ ನಡೆಸಲ್ಪಡುವ ಕೌನ್ಸೆಲಿಂಗ್ ಸಂದರ್ಭದಲ್ಲಿ ಪಾವತಿ ಮಾಡತಕ್ಕದ್ದೆಂದು ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆದೇಶಿಸಲಾಗಿತ್ತು.

2005-06ನೇ ಸಾಲಿನಲ್ಲಿ ಸರ್ಕಾರಿ ಕೋಟಾದಲ್ಲಿ ರಾಜ್ಯದ ಖಾಸಗಿ ವೈದ್ಯಕೀಯ/ದಂತ ಕಾಲೇಜುಗಳಿಗೆ ಪ್ರವೇಶ ಪಡೆದ ಎಂಬಿಬಿಎಸ್ ಮತ್ತು ಬಿಡಿಎಸ್‌ನ ವಿದ್ಯಾರ್ಥಿಗಳಿಗೆ ಬೋಧನಾ ಶುಲ್ಕವನ್ನು ಮೇಲೆ (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ನಿಗಧಿಪಡಿಸಲಾಗಿತ್ತು.

ವೈದ್ಯಕೀಯ/ದಂತ/ಆಯುರ್ವೇದ/ಯುನಾನಿ/ಹೋಮಿಯೋಪತಿ/ಫಿಜಿಯೋಥೆರಪಿ ಪದವಿ ಹಾಗೂ ಸ್ನಾತಕೋತ್ತರ ಕೋರ್ಸುಗಳಿಗೆ ಕಾಮೆಡ್-ಕೆ ಹಾಗೂ ಸಾಮಾನ್ಯ ಪ್ರವೇಶ ಪರೀಕ್ಷೆ ಮೂಲಕ ಆಯ್ಕೆಗೊಂಡು ಸರ್ಕಾರಿ ಹಾಗೂ ಖಾಸಗಿ ಕಾಲೇಜುಗಳಲ್ಲಿ 2005-06 ಮತ್ತು 2006-07ರಲ್ಲಿ ಪ್ರವೇಶ ಪಡೆದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ ಬೋಧನಾ ಶುಲ್ಕವನ್ನು ಪೋಷಕರ ವಾರ್ಷಿಕ ವರಮಾನ ರೂ. 2.00 ಲಕ್ಷಕ್ಕಿಂತ ಕಡಿಮೆ ಇರುವ ವಿದ್ಯಾರ್ಥಿಗಳಿಗೆ ಪೂರ್ತಿ ಶುಲ್ಕವನ್ನು ಪಾವತಿಸತಕ್ಕದ್ದೆಂದು, ವಿದ್ಯಾರ್ಥಿಗಳ ಪೋಷಕರ ವಾರ್ಷಿಕ ವರಮಾನ ರೂ. 2.00 ಲಕ್ಷಕ್ಕಿಂತ ಹೆಚ್ಚಿದ್ದಲ್ಲಿ ಶೇ. 50 ರಷ್ಟು ಶುಲ್ಕವನ್ನು ಪಾವತಿಸತಕ್ಕದ್ದೆಂದು, 2005-06ನೇ ಸಾಲಿನಲ್ಲಿ ನ್ಯಾಯಮೂರ್ತಿ ರಂಗವಿಠಲಾಚಾರ್ ಸಮಿತಿ ನಿಗಧಿಪಡಿಸಿದ ಶುಲ್ಕವನ್ನು ಗಣನೆಗೆ ತೆಗೆದುಕೊಳ್ಳತಕ್ಕದ್ದೆಂದು, ಕೇಂದ್ರ ಸರ್ಕಾರದಿಂದ ಮಂಜೂರಾದ ಯಾವುದೇ ಆರ್ಥಿಕ ಸಹಾಯವನ್ನು ಕಟಾಯಿಸಿ ಉಳಿದ ಶುಲ್ಕ ಮೊತ್ತವನ್ನು ಪಾವತಿಸತಕ್ಕದ್ದೆಂದು ಶುಲ್ಕ ಮರುಪಾವತಿಯನ್ನು ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದ ಹಂತದಲ್ಲಿ ಮಾಡತಕ್ಕದ್ದೆಂದು, ಸಮಾಜ ಕಲ್ಯಾಣ ಇಲಾಖೆಯ ಆಯುಕ್ತರು ವೈದ್ಯಕೀಯ ಶಿಕ್ಷಣ ನಿರ್ದೇಶಕರಿಗೆ ಆಯವ್ಯಯದಲ್ಲಿ ಗೊತ್ತುಪಡಿಸಿದ ಮೊತ್ತವನ್ನು ವರ್ಗಾಯಿಸತಕ್ಕದ್ದೆಂದು ಮೇಲೆ (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆದೇಶಿಸಲಾಗಿತ್ತು.

2006-2007ನೇ ಸಾಲಿಗೆ ಸಂಬಂಧಿಸಿದಂತೆ, ದಿನಾಂಕ : 01-07-2006 ಸಂಖ್ಯೆ : ಆಕುಕ 252 ಎಂಪಿಎಸ್ 2006ರ ಸರ್ಕಾರದ ಆದೇಶದ ಅನುಬಂಧ-9 ರನ್ವಯ ಶುಲ್ಕ ವಿನಾಯಿತಿಯನ್ನು ಒಟ್ಟಾಭಿಪ್ರಾಯ ಒಡಂಬಡಿಕೆರನ್ವಯ (Consensual Agreement) ಆಧರಿಸಿ ನೀಡಲು ಸರ್ಕಾರವು ಅನುಮತಿಸಿದ್ದು, ಪದವಿ ಕೋರ್ಸುಗಳಿಗೆ ರಿಯಾಯಿತಿ ಶುಲ್ಕ ಕ್ಯಾಟಗರಿ-ಎ (Lower Fee) ಸೀಟುಗಳಲ್ಲಿ ಪ್ರವೇಶಾತಿ ಹೊಂದಿದ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ವಿದ್ಯಾರ್ಥಿಗಳಿಗೆ ಯಾವುದೇ ಆದಾಯ ಮಿತಿ ಇಲ್ಲದೆ ಶೇ. 100 ರಷ್ಟು ಬೋಧನಾ ಶುಲ್ಕ ಮರುಪಾವತಿ ಮಾಡತಕ್ಕದ್ದೆಂದು, ಅಧಿಕ ಶುಲ್ಕ ಕ್ಯಾಟಗರಿ-ಬಿ (Higher Fee) ಸೀಟುಗಳಲ್ಲಿ ಪ್ರವೇಶಾತಿ ಹೊಂದಿದ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ವಿದ್ಯಾರ್ಥಿಗಳಿಗೆ ವಾರ್ಷಿಕ ಆದಾಯ ರೂ.2.00 ಲಕ್ಷಕ್ಕಿಂತ ಹೆಚ್ಚಿರುವ ವಿದ್ಯಾರ್ಥಿಗಳ ಬೋಧನಾ ಶುಲ್ಕದಲ್ಲಿ ಶೇ. 50 ರಷ್ಟು ಮರುಪಾವತಿಸುವುದು ಹಾಗೂ ವಾರ್ಷಿಕ ಆದಾಯ ರೂ. 2 ಲಕ್ಷಕ್ಕಿಂತ ಕಡಿಮೆ ಇರುವ ವಿದ್ಯಾರ್ಥಿಗಳ ಬೋಧನಾ ಶುಲ್ಕದಲ್ಲಿ

ಶೇ. 100 ರಷ್ಟು ಮರುಪಾವತಿಸತಕ್ಕದ್ದೆಂದು ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶ ಮತ್ತು ಅದರ ತಿದ್ದುಪಡಿಯಲ್ಲಿ ಶುಲ್ಕ ವಿನ್ಯಾಸವನ್ನು ಅಳವಡಿಸಲಾಗಿತ್ತು.

ಮೇಲೆ (5) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2005–06ನೇ ಸಾಲಿನಲ್ಲಿ ವೃತ್ತಿಪರ ಕಾಲೇಜುಗಳಲ್ಲಿ ಕ್ಯಾಟಗರಿ–ಎ (ಲೋಯರ್ ಫೀ) ಮತ್ತು ಕ್ಯಾಟಗರಿ–ಬಿ (ಹೈಯರ್ ಫೀ) ಸೀಟುಗಳಲ್ಲಿ ಪ್ರವೇಶಾತಿ ಪಡೆದ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ವಿದ್ಯಾರ್ಥಿಗಳ ಪೋಷಕರ ವಾರ್ಷಿಕ ಆದಾಯ ಮಿತಿ ರೂ. 1.00 ಲಕ್ಷಕ್ಕಿಂತ ಕಡಿಮೆ ಇರುವ ವಿದ್ಯಾರ್ಥಿಗಳಿಗೆ ಶೇ. 100 ರಷ್ಟು ಪೂರ್ಣ ಶುಲ್ಕವನ್ನು ಮರು ಪಾವತಿಸತಕ್ಕದ್ದೆಂದು ಆದೇಶಿಸಲಾಗಿತ್ತು.

ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೇಲೆ (6) ರಿಂದ (10)ರವರೆಗೆ ಓದಲಾದ ತಮ್ಮ ಪತ್ರಗಳಲ್ಲಿ ಖಾಸಗಿ ವೈದ್ಯಕೀಯ/ ದಂತ ವೈದ್ಯಕೀಯ ಕಾಲೇಜುಗಳಲ್ಲಿ 2005–06ನೇ ಸಾಲಿನಲ್ಲಿ ಎಂಬಿಬಿಎಸ್ ಮತ್ತು ಬಿಡಿಎಸ್ ವ್ಯಾಸಂಗಕ್ಕೆ ಸಿ.ಇ.ಟಿ. ಮುಖಾಂತರ ಅಧಿಕ ಶುಲ್ಕದಡಿ ಸರ್ಕಾರಿ ಸೀಟುಗಳಿಗೆ ಆಯ್ಕೆಯಾದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ವಿದ್ಯಾರ್ಥಿಗಳ ಪೋಷಕರ ವಾರ್ಷಿಕ ಆದಾಯ ಒಂದು ಲಕ್ಷಕ್ಕಿಂತಲೂ ಅಧಿಕವಿದ್ದು, ಅಂತಹ ವಿದ್ಯಾರ್ಥಿಗಳು ಸರ್ಕಾರದ ಆದೇಶ ಸಂಖ್ಯೆ : ಆಕುಕ 150 ಎಂಪಿಎಸ್ 2006 (ಭಾ), ದಿನಾಂಕ: 19–09–2006ರ ಆದೇಶದಂತೆ ತಮಗೂ ಶುಲ್ಕ ಮರುಪಾವತಿಸುವಂತೆ ಕೋರಿ ಮನವಿಗಳನ್ನು ಸಲ್ಲಿಸುತ್ತಿದ್ದು, ಅದರಂತೆ, ಇವರಿಗೆ ಶುಲ್ಕ ಮರುಪಾವತಿ ಮಾಡಲು ಸದರಿ ಆದೇಶದಲ್ಲಿ ಸ್ಪಷ್ಟತೆ ಇಲ್ಲವಾದ್ದರಿಂದ, ಇಂತಹ ವಿದ್ಯಾರ್ಥಿಗಳ ಶುಲ್ಕ ಮರುಪಾವತಿ ಬಗ್ಗೆ ಸ್ಪಷ್ಟೀಕರಣ ಕೋರಿ ಸೂಕ್ತ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಶ್ರೀ ವೈ.ಆರ್. ಮಂಜುನಾಥ್, ತೃತೀಯ ಎಂ.ಬಿ.ಬಿ.ಎಸ್. ವಿದ್ಯಾರ್ಥಿ, ಶ್ರೀ ರಾಜರಾಜೇಶ್ವರಿ ವೈದ್ಯಕೀಯ ವಿದ್ಯಾಲಯ, ಬೆಂಗಳೂರು ರವರು ಮೇಲೆ (11) ರಲ್ಲಿ ಓದಲಾದ ತಮ್ಮ ಪತ್ರಗಳಲ್ಲಿ 2005–06ನೇ ಸಾಲಿನಲ್ಲಿ ಸಾಮಾನ್ಯ ಪ್ರವೇಶ ಪರೀಕ್ಷೆ ಮೂಲಕ ಎಂಬಿಬಿಎಸ್ ವ್ಯಾಸಂಗಕ್ಕೆ ಅಧಿಕ ಶುಲ್ಕದಡಿ ಆಯ್ಕೆಯಾಗಿದ್ದು, ರಾಜರಾಜೇಶ್ವರಿ ವೈದ್ಯಕೀಯ ವಿದ್ಯಾಲಯದಲ್ಲಿ ವ್ಯಾಸಂಗ ಮಾಡುತ್ತಿದ್ದೇನೆಂದು, ನಾನು ಪರಿಶಿಷ್ಟ ಜಾತಿಗೆ ಸೇರಿದವನಾಗಿದ್ದು, ನನ್ನ ಕುಟುಂಬದ ವರಮಾನವು ಒಂದು ಲಕ್ಷಕ್ಕಿಂತ ಅಧಿಕ ಮತ್ತು ಎರಡು ಲಕ್ಷಕ್ಕಿಂತ ಕಡಿಮೆಯಿದೆಯೆಂದು ತಿಳಿಸುತ್ತಾ, ತನಗೂ ಬೋಧನಾ ಶುಲ್ಕವನ್ನು ಮರುಪಾವತಿಸುವ ಬಗ್ಗೆ ಸೂಕ್ತ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

2005–06ನೇ ಸಾಲಿನಲ್ಲಿ ಅಧಿಕ ಶುಲ್ಕದಡಿ ಪ್ರವೇಶ ಪಡೆದ ಪ. ಜಾತಿ/ಪ. ಪಂಗಡದ ಎಷ್ಟು ವಿದ್ಯಾರ್ಥಿಗಳಿಗೆ ಶುಲ್ಕ ಹಿಂಬರಿಸಬೇಕು, ಒಟ್ಟು ಮೊತ್ತ ಮತ್ತು ಹಣ ಈ ಸಾಲಿನಲ್ಲಿ ಲಭ್ಯವಿದೆಯೇ ಎಂಬ ಬಗ್ಗೆ ಸರ್ಕಾರಕ್ಕೆ ವರದಿ ನೀಡುವಂತೆ ಮೇಲೆ (12)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರನ್ನು ಕೋರಲಾಗಿತ್ತು.

ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೇಲೆ (13)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ 2005–06ನೇ ಸಾಲಿನಲ್ಲಿ ಸಿ.ಇ.ಟಿ. ಮೂಲಕ ಅಧಿಕ ಶುಲ್ಕ ಕೋಟಾದಡಿ ಅಯ್ಕೆಯಾದ ಎಂಬಿಬಿಎಸ್/ಬಿಡಿಎಸ್ ವಿದ್ಯಾರ್ಥಿಗಳ ಒಟ್ಟು ಸಂಖ್ಯೆ ಮತ್ತು ಬೇಕಾಗುವ ಅನುದಾನದ ವಿವರವನ್ನು ನೀಡುತ್ತಾ, 2005–06ನೇ ಸಾಲಿನಲ್ಲಿ ಸಿಇಟಿ ಮುಖಾಂತರ ಅಧಿಕ ಶುಲ್ಕದಡಿ ಪ್ರವೇಶ ಪಡೆದಿರುವ 38 ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ ಬೋಧನಾ ಶುಲ್ಕದ ವೆಚ್ಚ ರೂ. 2,58,06,050/–ಗಳನ್ನು ಈ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸಬಹುದಾಗಿದೆಯೆಂಬ ತಮ್ಮ ಅಭಿಪ್ರಾಯವನ್ನು ನೀಡಿರುತ್ತಾರೆ.

ಮೇಲೆ (14)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ 2005–06ನೇ ಸಾಲಿನಲ್ಲಿ ಸಿಇಟಿ ಮೂಲಕ ಅಧಿಕ ಶುಲ್ಕದ ವೈದ್ಯಕೀಯ/ದಂತ ವಿಜ್ಞಾನ ಸೀಟುಗಳಡಿ ಪ್ರವೇಶ ಪಡೆದ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಸರ್ಕಾರಿ ಆದೇಶ ಸಂಖ್ಯೆ: ಆಕುಕ 150 ಎಂಪಿಎಸ್ 2006 (ಭಾ), ದಿನಾಂಕ : 19–09–2006ರ ಪ್ರಕಾರ ರೂ. 1.00 ಲಕ್ಷಕ್ಕಿಂತ ಅಧಿಕ ವಾರ್ಷಿಕ ಆದಾಯ ಹೊಂದಿದ ವಿದ್ಯಾರ್ಥಿಗಳ ಬೋಧನಾ ಶುಲ್ಕವನ್ನು ಮರುಪಾವತಿಸಲು, ವೆಚ್ಚವನ್ನು ಇಲಾಖೆಯ ಸಂಬಂಧಿತ ಲೆಕ್ಕ ಶೀರ್ಷಿಕೆ ಬಾಬತ್ತಿನಿಂದ ಭರಿಸಿ ಮರುಪಾವತಿಸಲು ಸರ್ಕಾರದ ಅಭ್ಯಂತರವಿಲ್ಲವೆಂದು ವೈದ್ಯಕೀಯ ಶಿಕ್ಷಣ ನಿರ್ದೇಶಕರಿಗೆ ತಿಳಿಸಲಾಗಿತ್ತು.

ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೇಲೆ (15)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಆಕುಕ 150 ಎಂಪಿಎಸ್ 2006 (ಭಾಗ), ದಿನಾಂಕ : 19–09–2006 ರನ್ವಯ ಶುಲ್ಕ ಮರುಪಾವತಿಸಲು ಗೊಂದಲ ಉಂಟಾಗಿದೆಯೆಂದು ಹಾಗೂ ಇದರನ್ವಯ ಇತರೆ ವೈದ್ಯಕೀಯ ಕೋರ್ಸುಗಳ ವಿದ್ಯಾರ್ಥಿಗಳು ಶುಲ್ಕ ಮರುಪಾವತಿ ಮಾಡುವಂತೆ ಕೋರುವ ಸಂಭವವಿರುವುದರಿಂದ ಹಾಗೂ 2005–06ನೇ ಸಾಲಿನಲ್ಲಿ ಸಿಇಟಿ ಮೂಲಕ ಅಧಿಕ ಶುಲ್ಕದ ವೈದ್ಯಕೀಯ/ದಂತ ವಿಜ್ಞಾನ ಸೀಟುಗಳಡಿ ಪ್ರವೇಶ ಪಡೆದ ಕುಟುಂಬದ ವಾರ್ಷಿಕ ಆದಾಯ ರೂ. 1.00 ಲಕ್ಷಕ್ಕಿಂತ ಅಧಿಕವಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಸರ್ಕಾರದ ಆದೇಶ ಸಂಖ್ಯೆ : ಸಕಇ 410 ಪಕವಿ 2004, ದಿನಾಂಕ : 14–06–2005 ಮತ್ತು ಸಕಇ 410 ಪಕವಿ 2004 (ಭಾ), ದಿನಾಂಕ 14–02–2007ರ ಪ್ರಕಾರ 2005–06ನೇ

ಸಾಲಿನಲ್ಲಿ ಸಿಇಟಿ ಮೂಲಕ ಎಂಬಿಬಿಎಸ್/ಬಿಡಿಎಸ್ ವ್ಯಾಸಂಗಕ್ಕೆ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 1 ಎಂಪಿಎಸ್ 2005, ದಿನಾಂಕ : 19–07–2007 ರಲ್ಲಿ ನಿಗಧಿಪಡಿಸಿದ ದರದಲ್ಲಿ ಬೋಧನಾ ಶುಲ್ಕವನ್ನು ಮರುಪಾವತಿಸಿ, ವೆಚ್ಚವನ್ನು ಇಲಾಖೆಯ ಸಂಬಂಧಿತ ಲೆಕ್ಕಶೀರ್ಷಿಕೆ ಬಾಬತ್ತಿನಿಂದ ಭರಿಸಿ ಮರುಪಾವತಿಸಬಹುದೆಂದು ಸರ್ಕಾರವು ಆದೇಶ ನೀಡಿದಲ್ಲಿ ಯಾವುದೇ ಗೊಂದಲ ಉಂಟಾಗದೆ ಶುಲ್ಕ ಮರುಪಾವತಿ ಮಾಡುವುದು ಸಾಧ್ಯವೆಂದು ಸರ್ಕಾರಕ್ಕೆ ತಿಳಿಸಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, 2005–06ನೇ ಸಾಲಿನಲ್ಲಿ ಸಿ.ಇ.ಟಿ. ಮೂಲಕ ಖಾಸಗಿ ವೈದ್ಯಕೀಯ/ದಂತ ವೈದ್ಯಕೀಯ ಕಾಲೇಜುಗಳಲ್ಲಿನ ಎಂಬಿಬಿಎಸ್/ಬಿಡಿಎಸ್ ವ್ಯಾಸಂಗದ ಸರ್ಕಾರಿ ಸೀಟುಗಳಿಗೆ ಒಂದು ಲಕ್ಷಕ್ಕಿಂತ ಹೆಚ್ಚಿನ ವಾರ್ಷಿಕ ವರಮಾನವನ್ನು ಹೊಂದಿದ್ದು ಅಧಿಕ ಶುಲ್ಕದಡಿ ಪ್ರವೇಶ ಪಡೆದಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಸರ್ಕಾರದ ಆದೇಶ ಸಂಖ್ಯೆ : ಆಕುಕ 1 ಎಂಪಿಎಸ್ 2005, ದಿನಾಂಕ : 19–07–2005ರಲ್ಲಿ ನಿಗಧಿಪಡಿಸಿದ ದರದಲ್ಲಿ ಶುಲ್ಕ ಮರುಪಾವತಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 171 ಎಂಪಿಎಸ್ 2009, ಬೆಂಗಳೂರು, ದಿನಾಂಕ: 8ನೇ ಜನವರಿ 2010**

2005–06ನೇ ಸಾಲಿನಲ್ಲಿ ಸಿ.ಇ.ಟಿ. ಮೂಲಕ ಎಂಬಿಬಿಎಸ್/ಬಿಡಿಎಸ್ ವ್ಯಾಸಂಗದ ಸರ್ಕಾರಿ ಸೀಟುಗಳಿಗೆ ಅಧಿಕ ಶುಲ್ಕದಡಿ ಪ್ರವೇಶ ಪಡೆದಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಶುಲ್ಕ ಮರುಪಾವತಿಸಲು ಆದೇಶಿಸಲಾಗಿದೆ.

1. 2005–06ನೇ ಶೈಕ್ಷಣಿಕ ಸಾಲಿನಲ್ಲಿ ಸಿ.ಇ.ಟಿ. ಮೂಲಕ ರಾಜ್ಯದ ಖಾಸಗಿ ವೈದ್ಯಕೀಯ/ದಂತ ಕಾಲೇಜುಗಳಲ್ಲಿನ ಸರ್ಕಾರಿ ಕೋಟಾದ ಸೀಟುಗಳಿಗೆ ಅಧಿಕ ಶುಲ್ಕದಡಿಯಲ್ಲಿ ಪ್ರವೇಶಪಡೆದಿರತಕ್ಕದ್ದು.
2. ವಿದ್ಯಾರ್ಥಿಗಳ ಕುಟುಂಬದ ವಾರ್ಷಿಕ ವರಮಾನವು ರೂ. 1.00 ಲಕ್ಷಕ್ಕಿಂತ ಅಧಿಕವಿರುವ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದ ದಾಖಲೆಗಳ ಮೂಲಕ ಖಚಿತಪಡಿಸಿಕೊಳ್ಳತಕ್ಕದ್ದು.
3. 2005–06ನೇ ಸಾಲಿನಿಂದ 2009–10ನೇ ಸಾಲಿನವರೆಗೂ ಸಮಾಜ ಕಲ್ಯಾಣ ಇಲಾಖೆಯಿಂದ ಯಾವುದೇ ಶುಲ್ಕ ಮರುಪಾವತಿ ಪಡೆದಿಲ್ಲದಿರುವುದರ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.
4. ಸರ್ಕಾರಿ ಆದೇಶ ಸಂಖ್ಯೆ : ಆಕುಕ 1 ಎಂಪಿಎಸ್ 2005, ದಿನಾಂಕ : 19–07–2005ರಲ್ಲಿ ನಿಗಧಿಪಡಿಸಿದ ದರದಲ್ಲಿ ಶುಲ್ಕ ಮರುಪಾವತಿಸಕ್ಕದ್ದು.
5. ಇದಕ್ಕೆ ತಗಲುವ ವೆಚ್ಚವನ್ನು ಇಲಾಖೆಯ ಸಂಬಂಧಿತ ಲೆಕ್ಕಶೀರ್ಷಿಕೆಯಡಿ ಭರಿಸತಕ್ಕದ್ದು.

ಈ ಆದೇಶವನ್ನು ಸಮಾಜ ಕಲ್ಯಾಣ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಸಕಇ 91 ಎಸ್‌ಎಲ್‌ಪಿ 2009, ದಿನಾಂಕ : 15–10–2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀರಾಮರೆಡ್ಡಿ**

ಪಿ.ಆರ್.228

ಸರ್ಕಾರದ ಅಧೀನ ಕಾಯಾದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎನ್. ಪುಟ್ಟಸ್ವಾಮಿ, ಹಿಂದಿನ ತಹಶೀಲ್ದಾರ್, ಚಾಮರಾಜನಗರ ತಾಲ್ಲೂಕು (ಪ್ರಸ್ತುತ ನಿವೃತ್ತರು), ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ :**
1) ಚಾಮರಾಜನಗರ ಜಿಲ್ಲಾಧಿಕಾರಿಯವರ ಪತ್ರ ಸಂ: ಎ.ಡಿ.ಎಂ: ಸಿಆರ್: 44/2005–06, ದಿನಾಂಕ : 26–07–2005.
2) ಚಾಮರಾಜನಗರ ಜಿಲ್ಲಾಧಿಕಾರಿಯವರ ಪತ್ರದ ಸಂ: ಸಿಬ್ಬಂದಿ (2): ಸಿಆರ್: 84:2005–06, ದಿನಾಂಕ : 05-03–2007
3) ಕಾರಣ ಕೇಳುವ ನೋಟೀಸ್ ಸಂ : ಆರ್‌ಡಿ 46 ಎಡಿಇ 2005, ದಿನಾಂಕ: 29–05–2007
4) ಶ್ರೀ ಎನ್. ಪುಟ್ಟಸ್ವಾಮಿ, ಇವರ ಲಿಖಿತ ಸಮಜಾಯಿಷಿ ದಿನಾಂಕ: 23–08–2007
5) ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 46 ಎಡಿಇ 2005, ದಿನಾಂಕ : 28–03–2008

6) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ : 03-02-2009
7) ಎರಡನೇ ಕಾರಣ ಕೇಳುವ ನೋಟೀಸ್ ದಿನಾಂಕ : 15-04-2009
8) ಶ್ರೀ ಎನ್. ಪುಟ್ಟಸ್ವಾಮಿ, ಹಿಂದಿನ ತಹಶೀಲ್ದಾರ್ (ಪ್ರಸ್ತುತ ನಿವೃತ್ತ) ಚಾಮರಾಜನಗರ ಇವರ ಲಿಖಿತ ಉತ್ತರ ದಿನಾಂಕ : 30-04-2009 ಮತ್ತು 05-09-2009.

**ಪ್ರಸ್ತಾವನೆ :**

ಶ್ರೀ ಎನ್. ಪುಟ್ಟಸ್ವಾಮಿ, ನಿವೃತ್ತ ತಹಶೀಲ್ದಾರ್, ಇವರು ಈ ಹಿಂದೆ ಚಾಮರಾಜನಗರ ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ : 15-06-2005ರಂದು ಜಿಲ್ಲಾಧಿಕಾರಿಗಳು, ಚಾಮರಾಜನಗರ ತಾಲ್ಲೂಕು ಕಛೇರಿಗೆ ಭೇಟಿ ನೀಡಿ ತಪಾಸಣೆ ನಡೆಸಿದಾಗ ಆರ್.ಆರ್.ಟಿ. ಶಾಖೆ, ಭೂ ಮಂಜೂರಾತಿ ಶಾಖೆ, ಡಿ.ಸಿ.ಬಿ, ಚುನಾವಣೆ ಶಾಖೆ ಮತ್ತು ಮುಜರಾಯಿ ಶಾಖೆಗಳ ಕೆಲವು ಕಡತಗಳನ್ನು ಪರಿಶೀಲಿಸಲಾಗಿದ್ದು, ಅವುಗಳಲ್ಲಿ ಕೆಲವು ಮುಖ್ಯ ಲೋಪದೋಷಗಳು ಕಂಡು ಬಂದಿದ್ದರಿಂದ, ಈ ಬಗ್ಗೆ ವಿವರಣೆ ಕೋರಿ ಶ್ರೀ ಎನ್. ಪುಟ್ಟಸ್ವಾಮಿ, ನಿವೃತ್ತ ತಹಶೀಲ್ದಾರ್ ಇವರಿಗೆ ನೋಟೀಸ್ ನೀಡಿದ್ದು, ಇವರು ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿರುವುದರಿಂದ ಹಾಗೂ ಇವರು ನೀಡಿರುವ ವಿವರಣೆ ತೃಪ್ತಿಕರವಾಗಿಲ್ಲದ ಕಾರಣ, ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಕ್ರ.ಸಂ. (1) ಮತ್ತು (2) ರಲ್ಲಿ ಓದಲಾದ ಪತ್ರಗಳಲ್ಲಿ ಜಿಲ್ಲಾಧಿಕಾರಿಗಳು, ಚಾಮರಾಜನಗರ ಇವರು ಸರ್ಕಾರವನ್ನು ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ, ಸರ್ಕಾರವು 1957ರ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರಡಿಯಲ್ಲಿ ಆರೋಪ ಪಟ್ಟಿಗಳನ್ನು ಕಾರಣ ಕೇಳುವ ನೋಟೀಸಿನೊಂದಿಗೆ ಆರೋಪಿತ ಅಧಿಕಾರಿಗೆ ಜಾರಿ ಮಾಡಿ, ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ. (3) ರಲ್ಲಿ ಓದಲಾದ ದಿನಾಂಕ : 29-05-2007ರ ನೋಟೀಸ್ ಮೂಲಕ ಶ್ರೀ ಎನ್. ಪುಟ್ಟಸ್ವಾಮಿ, ಇವರಿಗೆ ನೀಡಲಾಗಿದೆ. ಹಾಗೂ ಕ್ರ.ಸಂ. (4)ರಲ್ಲಿ ಓದಲಾದ ದಿನಾಂಕ : 23-08-2007ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಎನ್. ಪುಟ್ಟಸ್ವಾಮಿ, ಇವರು ತಮ್ಮ ವಿರುದ್ಧದ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಈ ಹಿನ್ನಲೆಯಲ್ಲಿ, ಆಪಾದಿತ ಅಧಿಕಾರಿ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಶ್ರೀ ಕೆ.ಎನ್. ನಾಗೇಂದ್ರಕುಮಾರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ಇವರ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 11 ಮತ್ತು 11(ಎ)ರ ಪ್ರಕಾರ ನೇಮಿಸಿ ಕ್ರ.ಸಂ. (5) ರಲ್ಲಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. (6) ರಲ್ಲಿ ದಿನಾಂಕ : 03-02-2009 ರಲ್ಲಿ ಈ ಪ್ರಕರಣ ಕುರಿತು ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ಶ್ರೀ ಎನ್. ಪುಟ್ಟಸ್ವಾಮಿ, ಹಿಂದಿನ ತಹಶೀಲ್ದಾರ್ (ಪ್ರಸ್ತುತ ನಿವೃತ್ತರು) ಇವರ ವಿರುದ್ಧ ಆರೋಪಗಳ ಕುರಿತು ಈ ಕೆಳಕಂಡಂತೆ ನಿರ್ಣಯಿಸಿ ವರದಿ ನೀಡಿರುತ್ತಾರೆ.

ಆರೋಪಿತ ಅಧಿಕಾರಿ ಗ್ರಾಮಪಂಚಾಯಿತಿಯಿಂದ ಸಾರ್ವಜನಿಕ ಚುನಾವಣೆಯ ಖರ್ಚು ವೆಚ್ಚಗಳಿಗಾಗಿ ಬಿಡುಗಡೆಯಾದ ಹಣವನ್ನು ಖರ್ಚು ಮಾಡಿದ ಬಗ್ಗೆ ದೈನಂದಿನ ವೆಚ್ಚದ ನಿರ್ವಹಣೆಯಲ್ಲಿ ನಗದು ಪುಸ್ತಕವನ್ನು ದಿನಾಂಕ 23-01-2005 ರಿಂದ 14-06-2005 ರವರೆಗೆ ಅಂದರೆ ಆಪಾದನೆ ಹೊರಿಸಿರುವ ದಿನಾಂಕದವರೆಗೆ ಬರೆದಿಲ್ಲವೆನ್ನುವ ಬಗ್ಗೆ ಇದ್ದು, ಬಿಡುಗಡೆಯಾದ ಹಣವನ್ನು ದುರುಪಯೋಗಪಡಿಸಿಕೊಂಡಿದ್ದಾರೆ ಎನ್ನುವ ಬಗ್ಗೆ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಹಾಗೂ ಆರ್ಥಿಕ ಸಂಹಿತೆ ನಿಯಮಗಳಂತೆ ನಗದು ಪುಸ್ತಕವನ್ನು ನಿರ್ವಹಿಸಿಲ್ಲವಾದ್ದರಿಂದ ಆಪಾದನೆ ರುಜುವಾತಾಗಿದೆ ಮತ್ತು ಎಪಿಎಂಸಿ ಚುನಾವಣೆಗೆ ರೂ. 3,30,000 ಅನುದಾನ ಬಿಡುಗಡೆಯಾಗಿದ್ದು, ಚುನಾವಣೆಗೆ ರೂ. 2,58,073 ವೆಚ್ಚಮಾಡಿ ರೂ. 71,927/- ನ್ನು ಸರ್ಕಾರಕ್ಕೆ ಚಲನ್ ತುಂಬಿದ್ದು, ಎನ್.ಡಿ.ಸಿ. ಬಿಲ್ಲಿಗೆ ಜಿಲ್ಲಾಧಿಕಾರಿಗಳು ಚಾಮರಾಜನಗರ ಇವರು ಮೇಲು ಸಹಿ ಮಾಡಿ ಮಹಾಲೇಖಪಾಲರಿಗೆ ಕಳುಹಿಸಿದ್ದು, ಅದರಲ್ಲಿ ರೂ. 30,000/- ಗಳನ್ನು ಆಕ್ಷೇಪಣೆಗೊಳಪಡಿಸಿದ್ದರಿಂದ ಆಪಾದಿತ ಅಧಿಕಾರಿಯು ದಿನಾಂಕ : 26-11-2007ರಂದು ರೂ. 29,700/- ಸರ್ಕಾರಕ್ಕೆ ಜಮಾ ಮಾಡಿದ್ದು, ಈ ಆಕ್ಷೇಪಣೆ ಹಾಗೂ ಹಣ ಜಮಾ ಮಾಡಿದ ಬಗ್ಗೆ ಆಪಾದಿತ ಅಧಿಕಾರಿಯು ಯಾವುದೇ ವಿವರಣೆಯನ್ನು ಕೊಟ್ಟಿರುವುದಿಲ್ಲ. ಹಾಗೂ ನಗದು ಪುಸ್ತಕದಲ್ಲಿ ದೈನಂದಿನ ವಿವರಣೆಯನ್ನು ದಾಖಲಿಸದೆ ಇರುವುದರಿಂದ ಈ ರೀತಿ ಹಣದ ವ್ಯತ್ಯಾಸವಾಗಿರುವುದು

ಕಂಡು ಬರುತ್ತದೆ ಮತ್ತು ಚುನಾವಣೆ ವೆಚ್ಚದ ತಃಖ್ತೆಗಳನ್ನು ಸರಿಯಾದ ಸಮಯಕ್ಕೆ ಜಿಲ್ಲಾಧಿಕಾರಿಗಳಿಗೆ ಸಲ್ಲಿಸದಿರುವುದು ಕಂಡು ಬಂದಿರುವುದರಿಂದ ಆಪಾದನೆ ರುಜುವಾತು ಆಗುತ್ತದೆಂದು ವಿಚಾರಣಾಧಿಕಾರಿಗಳು ವರದಿ ಮಾಡಿದ್ದಾರೆ.

ಸರ್ಕಾರವು ವಿಚಾರಣಾ ವರದಿಯನ್ನು ಪರಿಶೀಲಿಸಿ ಶ್ರೀ ಎನ್. ಪುಟ್ಟಸ್ವಾಮಿ, ನಿವೃತ್ತ ತಹಶೀಲ್ದಾರ್ ಅವರಿಗೆ ಕ್ರ.ಸಂ: (7)ರಲ್ಲಿ ಎರಡನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿದೆ. ಅದರಂತೆ ಕ್ರ.ಸಂ.(8)ರಲ್ಲಿ ಶ್ರೀ ಎನ್. ಪುಟ್ಟಸ್ವಾಮಿ, ನಿವೃತ್ತ ತಹಶೀಲ್ದಾರ್ ತಮ್ಮ ಲಿಖಿತ ಸಮಜಾಯಿಷಿಯನ್ನು ನೀಡಿ ರೂ. 29,706–00ಗಳನ್ನು ಸರ್ಕಾರಕ್ಕೆ ಜಮಾ ಮಾಡಿರುವುದರಿಂದ ಆಪಾದನೆಯಿಂದ ಮುಕ್ತಗೊಳಿಸಬೇಕಾಗಿ ಕೋರಿರುತ್ತಾರೆ. ಅದರಂತೆ, ಸರ್ಕಾರವು ವಿಚಾರಣೆ ವರದಿ ಹಾಗೂ ಆಪಾದಿತರ ಹೇಳಿಕೆಯನ್ನು ಪರಿಶೀಲಿಸಿ, ಆಪಾದಿತರು ನಿಯಮಗಳ ಉಲ್ಲಂಘನೆ ಮಾಡಿರುವುದು ವಿಚಾರಣೆಯಲ್ಲಿ ದಾಖಲೆ ಹಾಗೂ ಸಾಕ್ಷಿಗಳ ಸಮೇತ ಸಾಬೀತಾಗಿರುವುದರಿಂದ ಸರ್ಕಾರವು ಗ್ರಾಮ ಪಂಚಾಯಿತಿ ಚುನಾವಣೆ ವೆಚ್ಚಕ್ಕಾಗಿ ಬಿಡುಗಡೆಯಾದ ಹಣದಲ್ಲಿ ವೆಚ್ಚ ಮಾಡಿ ಉಳಿದ 30,000/– ರೂಪಾಯಿಗಳನ್ನು ದಿನಾಂಕ : 14–06–2005 ರಿಂದ ದಿನಾಂಕ: 26–11–2007ರವರೆಗೆ ಸರ್ಕಾರಕ್ಕೆ ಮರಳಿಸದೆ ತಾತ್ಕಾಲಿಕವಾಗಿ ದುರುಪಯೋಗಪಡಿಸಿಕೊಂಡಿದ್ದರಿಂದ ಸದರಿ ಅಧಿಕಾರಿಯವರ ಡಿ.ಸಿ.ಆರ್.ಜಿ.ಯಿಂದ ರೂ. 5,000/–ಗಳ ದಂಡನೆಯನ್ನು ವಿಧಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ : ಆರ್‌ಡಿ 46 ಎಡಿಇ 2005, ಬೆಂಗಳೂರು, ದಿನಾಂಕ: 16ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಎನ್. ಪುಟ್ಟಸ್ವಾಮಿ, ನಿವೃತ್ತ ತಹಶೀಲ್ದಾರ್ ಅವರ ವಿರುದ್ಧ ವಿಚಾರಣೆಯಲ್ಲಿ ಆಪಾದನೆಗಳು ಸಾಬೀತಾಗಿದ್ದರಿಂದ ಶ್ರೀಯುತರ ಡಿ.ಸಿ.ಆರ್.ಜಿ.ಯಿಂದ ರೂ. 5,000/–ಗಳನ್ನು ದಂಡನೆಯ ರೂಪದಲ್ಲಿ ವಸೂಲು ಮಾಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ.ಸಸಾಲಟ್ಟಿ**

ಪಿ.ಆರ್.229

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ**

**ವಿಷಯ :** ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ಇಲ್ಲಿಗೆ ಮಂಜೂರಾದ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ : ಯೋಇ 23 ಮಪ್ರಮಂ 2008, ದಿನಾಂಕ : 25–09–2008.

2) ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ ಶಿವಮೊಗ್ಗ ಇವರ ಪತ್ರ ಸಂಖ್ಯೆ : ಮಪ್ರಮಂ/ಸಿಬ್ಬಂದಿ/2009–10/1267, ದಿನಾಂಕ : 22–12–2009

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಮಂಜೂರಾಗಿರುವ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ : 24–08–2008ರಿಂದ 23–08–2009ರವರೆಗೆ ಮುಂದುವರೆಸಲಾಗಿದ್ದು ಪ್ರಸ್ತುತ ಸದರಿ ಹುದ್ದೆಗಳನ್ನು 24–08–2009 ರಿಂದ ಮುಂದಿನ ಎರಡು ವರ್ಷಗಳ ಅವಧಿಗೆ ಮುಂದುವರೆಸುವಂತೆ ಮೇಲೆ ಓದಲಾದ (2) ರಲ್ಲಿ ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಇವರು ತಮ್ಮ ಪತ್ರದಲ್ಲಿ ಕೋರಿದ್ದು, ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 33 ಮಪ್ರಮಂ 2009, ಬೆಂಗಳೂರು, ದಿನಾಂಕ: 16ನೇ ಜನವರಿ 2010**

ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ, ಇಲ್ಲಿಗೆ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ : 24–08–2009 ರಿಂದ 23–08–2010 ರವರೆಗೆ (ಒಂದು ವರ್ಷದವರೆಗೆ) ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

**ಅ) ಆಡಳಿತ ವಿಭಾಗ :–**

1. ಪ್ರಥಮ ದರ್ಜೆ ಸಹಾಯಕರು–2 ಹುದ್ದೆಗಳು
2. ಬೆರಳಚ್ಚುಗಾರರು – 1 ಹುದ್ದೆ

**ಆ) ಲೆಕ್ಕಪತ್ರ ವಿಭಾಗ :–**

1. ಸಹಾಯಕ ನಿಯಂತ್ರಕರು – 1 ಹುದ್ದೆ

**ಇ) ಯೋಜನಾ ವಿಭಾಗ :-**

1. ಉಪ ನಿರ್ದೇಶಕರು (ಯೋಜನೆ) – 1 ಹುದ್ದೆ

2. ಕಂಪ್ಯೂಟರ್ ಆಪರೇಟರ್ – 1 ಹುದ್ದೆ

**ಈ) ತಾಂತ್ರಿಕ ವಿಭಾಗ :-**

1. ಶೀಘ್ರಲಿಪಿಗಾರರು – 1 ಹುದ್ದೆ

2. ಡಿ ದರ್ಜೆ ನೌಕರರು – 1 ಹುದ್ದೆ

2) ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ : 10–07–1996 ರನ್ವಯ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

ಪಿ.ಆರ್.230

## ಒಳಾಡಳಿತ ಸಚಿವಾಲಯ

**ವಿಷಯ :** ಭದ್ರತಾ ಸಿದ್ಧತೆಗಳು – ತತ್ಸಂಬಂಧ ವಿಧಿ–ವಿಧಾನಗಳ ಬಗ್ಗೆ

**ಪ್ರಸ್ತಾವನೆ :**

ಭಯೋತ್ಪಾದನೆಯು ನಮ್ಮ ದೇಶದ ಬಹುತೇಕ ಭಾಗಗಳಲ್ಲಿ ಒಂದು ಪಿಡುಗಿನಂತೆ ದೇಶವನ್ನು ಬಾಧಿಸುತ್ತಿದೆ. ದೇಶದ ಯಾವುದೇ ಪ್ರಮುಖ ಪಟ್ಟಣಗಳು ಈ ಪಿಡುಗಿನಿಂದ ಹೊರತಾಗಿಲ್ಲ.

ಭಯೋತ್ಪಾದಕರು ಕಳೆದ ಕೆಲವು ವರ್ಷಗಳಲ್ಲಿ ದೇಶದ ಉದ್ದಗಲಕ್ಕೂ ಇರುವ ಪ್ರಮುಖ ವಿತ್ತೀಯ ಹಾಗೂ ತಾಂತ್ರಿಕ ಸಂಸ್ಥೆಗಳ ಮೇಲೆ ದಾಳಿ ನಡೆಸಿದ್ದು, ಇದರಿಂದಾಗಿ ದೇಶದ ಆರ್ಥಿಕ ಸ್ಥಿತಿಗೆ ದೊಡ್ಡ ಮಟ್ಟದ ಧಕ್ಕೆ ತಂದಿರುವ ಜೊತೆಗೆ ದೇಶವಾಸಿಗಳ ಮನೋಸ್ಥೈರ್ಯವನ್ನು ಕುಗ್ಗಿಸಿದೆ.

ಕರ್ನಾಟಕ ರಾಜ್ಯದ ವಿವಿಧ ಭಾಗಗಳಲ್ಲಿಯೂ ಕೂಡ ಗಂಭೀರ ಸ್ವರೂಪದ ಭಯೋತ್ಪಾದನಾ ಕೃತ್ಯಗಳು ನಡೆದಿದ್ದು, ಆ ಸಂಬಂಧ ಇಂತಹ ಕೃತ್ಯಗಳಿಗೆ ಕಾರಣಕರ್ತರಾದವರನ್ನು ರಾಜ್ಯದ ಒಳಗೆ ಬಂಧಿಸಲಾಗಿದೆ.

ದೇಶದ ಅತ್ಯಂತ ಪ್ರಮುಖ ರಕ್ಷಣಾ ಹಾಗೂ ತಾಂತ್ರಿಕ ಸಂಸ್ಥೆಗಳು ಬೆಂಗಳೂರು ನಗರದಲ್ಲಿಯೇ ನೆಲೆ ಹೊಂದಿದ್ದು, ಇವುಗಳ ರಕ್ಷಣೆ ಹಾಗೂ ಭದ್ರತೆ ಒಟ್ಟಾರೆ ರಾಷ್ಟ್ರದ ಭದ್ರತೆ ಹಾಗೂ ಅಭಿವೃದ್ಧಿಗೆ ಪೂರಕವಾಗಿವೆ.

ಈ ಹಿನ್ನೆಲೆಯಲ್ಲಿ ಸರ್ಕಾರವು ಸಂಪೂರ್ಣವಾಗಿ ಸಜ್ಜಾಗಿ ಈ ಪಿಡುಗನ್ನು ಸಮರ್ಥವಾಗಿ ಎದುರಿಸುವಲ್ಲಿ ಹಾಗೂ ಮುಖ್ಯವಾಗಿ ಅಂತಹ ಕುಕೃತ್ಯಗಳು ನಡೆಯದಂತೆ ಮುನ್ನೆಚ್ಚರಿಕೆ ಕ್ರಮಗಳನ್ನು ಹಮ್ಮಿಕೊಂಡು ಇಂತಹ ಯಾವುದೇ ಭಯೋತ್ಪಾದನಾ ಕೃತ್ಯಗಳು ರಾಜ್ಯದಲ್ಲಿ ಎಲ್ಲೂ ತಲೆಯೆತ್ತದಂತೆ ಎಚ್ಚರಿಕೆ ವಹಿಸುವುದು ಅತ್ಯಂತ ಅವಶ್ಯಕವಾಗಿದೆ. ಈ ಉದ್ದೇಶಕ್ಕಾಗಿ ಒಂದು ಸುವ್ಯವಸ್ಥಿತ ಹಾಗೂ ಪರಿಪೂರ್ಣವಾದ ಭದ್ರತಾ ಯೋಜನೆಯನ್ನು ಅಳವಡಿಸಿಕೊಂಡು ವಿವಿಧ ಮಾದರಿಯ ಎಲ್ಲಾ ಭಯೋತ್ಪಾದನಾ ಕೃತ್ಯವನ್ನು ಮಟ್ಟ ಹಾಕುವುದು ಬಹಳ ಅವಶ್ಯಕವಾಗಿದೆ. ಆದ್ದರಿಂದ ಇಂತಹ ಕಾರ್ಯಾಚರಣೆಗೆ ಅನುಕೂಲವಾಗುವಂತೆ ಈ ಕೆಳಕಂಡ ಕಾರ್ಯವಿಧಾನಗಳನ್ನು ರೂಪಿಸಲು ತೀರ್ಮಾನಿಸಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ :

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 118 ಎಸ್‌ಎಸ್‌ಟಿ 2009, ಬೆಂಗಳೂರು, ದಿನಾಂಕ 21ನೇ ಜನವರಿ 2010**

ರಾಜ್ಯದ ಯಾವುದೇ ಭಾಗದಿಂದ ಬಾಂಬ್ ಸಿಡಿತ ಅಥವಾ ಬೇರೆ ಯಾವುದೇ ಭಯೋತ್ಪಾದನಾ ಕೃತ್ಯ ವರದಿಯಾದ ಕೂಡಲೇ, ಸಂಬಂಧಪಟ್ಟ ಘಟಕಾಧಿಕಾರಿಗಳಾದ ಅಂದರೆ, ಪೊಲೀಸ್ ಆಯುಕ್ತರು/ ಜಿಲ್ಲೆಗಳ ಪೊಲೀಸ್ ಅಧೀಕ್ಷಕರು ತಕ್ಷಣವೇ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ (ಆಂತರಿಕ ಭದ್ರತೆ) ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ (ಕಾನೂನು ಮತ್ತು ಸುವ್ಯವಸ್ಥೆ) ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್ (ರಾಜ್ಯ ಗುಪ್ತ ವಾರ್ತೆ) ಭಯೋತ್ಪಾದನಾ ನಿಗ್ರಹ ದಳ (ಕಾರ್ಯಾಚರಣೆ) ಸಂಬಂಧಪಟ್ಟ ವಲಯಗಳ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರಿಗೆ ಆ ಮಾಹಿತಿಯನ್ನು ನೀಡುವುದು ಅವರ ಪ್ರಾಥಮಿಕ ಹಾಗೂ ಅತ್ಯಂತ ಪ್ರಮುಖ ಕರ್ತವ್ಯವಾಗಿರುತ್ತದೆ. ಇದರ ಜೊತೆಗೆ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ (ರಾಜ್ಯ ಗುಪ್ತ ವಾರ್ತೆ) ರವರು

ಅಂತಹ ಘಟನೆಯ ಬಗ್ಗೆ ತಕ್ಷಣವೇ ಸನ್ಮಾನ್ಯ ಮುಖ್ಯಮಂತ್ರಿಗಳು, ಸನ್ಮಾನ್ಯ ಗೃಹ ಸಚಿವರು, ಮುಖ್ಯ ಕಾರ್ಯದರ್ಶಿಗಳು, ಅಪರ ಮುಖ್ಯ ಕಾರ್ಯದರ್ಶಿಗಳು : ಪ್ರಧಾನ ಕಾರ್ಯದರ್ಶಿಗಳು, ಒಳಾಡಳಿತ ಇಲಾಖೆ ಹಾಗೂ ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿರವರಿಗೂ ಈ ಬಗ್ಗೆ ತಕ್ಷಣದ ಮಾಹಿತಿ ನೀಡುವ ಜವಾಬ್ದಾರಿಯನ್ನು ಹೊಂದಿರುತ್ತಾರೆ.

2. ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ (ಆಂತರಿಕ ಭದ್ರತೆ)/ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್ ಭಯೋತ್ಪಾದನಾ ನಿಗ್ರಹ ದಳ (ಕಾರ್ಯಾಚರಣೆ) ಅಥವಾ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ (ಆಂತರಿಕ ಭದ್ರತೆ) ರವರಿಂದ ನೇಮಿಸಲ್ಪಡುವ ಇತರೆ ಯಾವುದೇ ಪೊಲೀಸ್ ಅಧಿಕಾರಿಯು ಕಾರ್ಯಾಚರಣೆ ಕೈಗೆತ್ತಿಕೊಳ್ಳುವವರೆಗೆ ಪರಿಸ್ಥಿತಿಯನ್ನು ನಿಗ್ರಹಿಸಿ ಸಾರ್ವಜನಿಕ ಆಸ್ತಿ–ಪಾಸ್ತಿಗಳಿಗೆ ಅತ್ಯಲ್ಪ ಪ್ರಮಾಣದ ನಷ್ಟವಾಗುವ ಹಾಗೆ ವ್ಯವಹರಿಸುವ ಜವಾಬ್ದಾರಿ ಘಟಕಾಧಿಕಾರಿಯವರದ್ದೇ ಆಗಿರುತ್ತದೆ. ಈ ಮಧ್ಯೆ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ (ಆಂತರಿಕ ಭದ್ರತೆ) ಅಥವಾ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್ ಭಯೋತ್ಪಾದನಾ ನಿಗ್ರಹ ದಳ ಅಥವಾ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ (ಆಂತರಿಕ ಭದ್ರತೆ) ರವರಿಂದ ನೇಮಕಗೊಂಡ ಇತರೆ ಯಾವುದೇ ಅಧಿಕಾರಿಯು ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ (ಕೆಎಸ್‌ಆರ್‌ಪಿ) ಅಥವಾ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್ (ಕೆಎಸ್‌ಆರ್‌ಪಿ) ರವರನ್ನು ತಕ್ಷಣವೇ ಸಂಪರ್ಕಿಸಿ ಅಗತ್ಯವಿರುವ ಕಮಾಂಡೋ ಪಡೆಗಳನ್ನು ಅಥವಾ ಇತರೆ ಪಡೆಗಳನ್ನು ಕರೆಸಿಕೊಳ್ಳತಕ್ಕದ್ದು.

3. ಸಮಸ್ಯೆಯ ತೀವ್ರತೆ ಮತ್ತು ಪ್ರಮಾಣವನ್ನು ಆಧರಿಸಿ ಅಗತ್ಯವೆನಿಸಿದರೆ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ ರವರು ಡಿ.ಜಿ. ಎನ್.ಎಸ್.ಜಿ. ರವರನ್ನು ಸಂಪರ್ಕಿಸಿ ಅಗತ್ಯ ಸಂಖ್ಯೆಯ ಎನ್‌ಎಸ್‌ಜಿ ಕಮಾಂಡೋ ಪಡೆಗಳನ್ನು ಕರೆಸಿಕೊಳ್ಳಬಹುದು ಅಥವಾ ಕರ್ನಾಟಕ ಗೋವಾ ಸಬ್ ಏರಿಯಾ ಕಮಾಂಡರ್ ರವರನ್ನು ಅಥವಾ ಇತರೇ ಅಧಿಕಾರಿಗಳನ್ನು ಸಂಪರ್ಕಿಸಿ ಅಗತ್ಯ ಸಂಖ್ಯೆಯ ಮಿಲಿಟರಿ ಕಮಾಂಡೋಗಳನ್ನು ಕರೆಸಿಕೊಳ್ಳಬಹುದು. ಅಗತ್ಯವೆನಿಸಿದಲ್ಲಿ ಅಗತ್ಯ ಸಂಖ್ಯೆಯ ಯಾವುದೆ ಸಿಪಿಎಂಎಫ್ ಸಿಬ್ಬಂದಿಯನ್ನು ಕರೆಸಿಕೊಳ್ಳುವ ಪೂರ್ಣ ಸ್ವಾತಂತ್ರ್ಯವನ್ನು ಅವರು ಹೊಂದಿರುತ್ತಾರೆ.

4. ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್ ಭಯೋತ್ಪಾದನಾ ನಿಗ್ರಹ ದಳ (ಕಾರ್ಯಾಚರಣೆ) ಅಥವಾ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ (ಆಂತರಿಕ ಭದ್ರತೆ) ರವರಿಂದ ನೇಮಿತನಾದ ಯಾವುದೇ ಅಧಿಕಾರಿಯು ಕಾರ್ಯಾಚರಣೆಯನ್ನು ಕೈಗೆತ್ತಿಕೊಂಡ ಕೂಡಲೇ ಘಟಕಾಧಿಕಾರಿಗಳಾದ ಅಂದರೆ ಸಂಬಂಧಪಟ್ಟ ಪೊಲೀಸ್ ಆಯುಕ್ತರು/ ಜಿಲ್ಲಾ ಪೊಲೀಸ್ ಅಧೀಕ್ಷಕರು ತಮ್ಮ ಸಹಾಯವನ್ನು ಅಂದರೆ ಎಲ್ಲಾ ಅವಶ್ಯಕ ಮಾನವ ಸಂಪನ್ಮೂಲ, ಸಾಮಗ್ರಿ, ಇತ್ಯಾದಿಗಳನ್ನು ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ (ಆಂತರಿಕ ಭದ್ರತೆ) ರವರಿಗೆ ಒದಗಿಸಬೇಕು. ಇದರ ಜೊತೆಗೆ ಎಲ್ಲಾ ಸಂಬಂಧಪಟ್ಟ ಆಸ್ಪತ್ರೆಗಳಿಗೆ ಎಚ್ಚರಿಕೆ ನೀಡಿ ಅಗತ್ಯವಿರುವ ಸಂಖ್ಯೆಯಲ್ಲಿ ಆಂಬ್ಯುಲೆನ್ಸ್ ವಾಹನಗಳು ಹಾಗೂ ವೈದ್ಯಕೀಯ ನೆರವು ಪಡೆ, ಇತ್ಯಾದಿಗಳನ್ನು ಒದಗಿಸುವುದು ಘಟಕಾಧಿಕಾರಿಗಳ ಜವಾಬ್ದಾರಿಯಾಗಿರುತ್ತದೆ. ಯಾವುದೇ ದೊಂಬಿ ಅಥವಾ ಅಶಾಂತಿಯನ್ನು ತಡೆಯುವ ಮತ್ತು ಸುಗಮ ಸಂಚಾರದ ದೃಷ್ಟಿಯಿಂದ ಕಾರ್ಯಾಚರಣೆ ಸ್ಥಳದ ಸುತ್ತಮುತ್ತಲಿನ ಪ್ರದೇಶದಲ್ಲಿ ಸೂಕ್ತ ಬಂದೋಬಸ್ತು ಹಾಗೂ ಸಂಚಾರ ವ್ಯವಸ್ಥೆಯನ್ನು ಸುಗಮಗೊಳಿಸುವ ಜವಾಬ್ದಾರಿಯು ಸಹ ಘಟಕಾಧಿಕಾರಿಗಳದ್ದಾಗಿರುತ್ತದೆ. ಸ್ಥಾನಿಕ ವೈದ್ಯಾಧಿಕಾರಿಗಳು (ಆರ್.ಎಂ.ಓ) ಅಥವಾ ಆಸ್ಪತ್ರೆಯ ಇತರೆ ಅಧಿಕಾರಿಗಳು ಬಹು ಸಂಖ್ಯೆಯ ಗಾಯಾಳುಗಳ ಅವಶ್ಯಕತೆಗಳನ್ನು ಪೂರೈಸಲು ಅಗತ್ಯ ತುರ್ತು ವ್ಯವಸ್ಥೆಯನ್ನು ಮಾಡಬೇಕು.

5. ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್ ಭಯೋತ್ಪಾದನಾ ನಿಗ್ರಹ ದಳ (ಕಾರ್ಯಾಚರಣೆ) ಅಥವಾ ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ (ಆಂತರಿಕ ಭದ್ರತೆ) ರವರಿಂದ ನೇಮಿಸಲ್ಪಡುವ ಅಧಿಕಾರಿಯು ಅಗತ್ಯವಿದ್ದಾಗ ಅವಶ್ಯಕ ಸಂಖ್ಯೆಯ ಅಗ್ನಿಶಾಮಕ ದಳ, ಗೃಹ ರಕ್ಷಣಾ ದಳ, ನಾಗರೀಕ ರಕ್ಷಣಾ ಸ್ವಯಂಸೇವಕರ ಸೇವೆಯನ್ನು ಪಡೆಯತಕ್ಕದ್ದು ಹಾಗೂ ಸರ್ಕಾರೇತರ ಸಂಸ್ಥೆಗಳ (ಎನ್.ಜಿ.ಓಸ್) ಸಹಾಯ ಪಡೆಯಬಹುದು. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಅಥವಾ ಬೆಂಗಳೂರು ಅಥವಾ ಜಿಲ್ಲಾ ಕೇಂದ್ರ ಸ್ಥಾನದಲ್ಲಿರುವ ಆ ಇಲಾಖೆಯ ಅತ್ಯಂತ ಜ್ಯೇಷ್ಠ ಅಧಿಕಾರಿಯನ್ನು ಸಹ ಈ ಬಗ್ಗೆ ಅವರು ಎಚ್ಚರಿಸತಕ್ಕದ್ದು ಅನಿಯಂತ್ರಿತ ವಿದ್ಯುತ್ ಸರಬರಾಜು ಮಾಡುವ ಬಗ್ಗೆ ಹಾಗೂ ಅವಶ್ಯಕವೆನಿಸಿದಲ್ಲಿ ಈ ವಿದ್ಯುತ್ ಸಂಪರ್ಕವನ್ನು ಕಡಿತಗೊಳಿಸುವ ಬಗ್ಗೆ ವಿದ್ಯುತ್ ವಿತರಣಾ ಸಂಸ್ಥೆಯ ಅಧಿಕಾರಿಗಳನ್ನು ಸಹ ಅವರು ಎಚ್ಚರಿಸತಕ್ಕದ್ದು. ಇಂತಹ ಸಂದರ್ಭದಲ್ಲಿ ಕಾರ್ಯಾಚರಣೆಯಲ್ಲಿ ತೊಡಗಿರುವ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳಿಗೆ ಎಲ್ಲಾ ತರಹೆಯ ಸಹಕಾರ ನೀಡುವುದು ಮತ್ತು ಕಾರ್ಯಾಚರಣೆ ಮುಕ್ತಾಯವಾಯಿತೆಂದು ಔಪಚಾರಿಕವಾಗಿ ಘೋಷಣೆಯಾಗುವವರೆಗೆ ಇಲಾಖೆಯ ಒಬ್ಬ ಹಿರಿಯ ಅಧಿಕಾರಿಯನ್ನು ಎಲ್ಲಾ ಸಮಯದಲ್ಲೂ ಲಭ್ಯವಿರುವಂತೆ ಸಂಪರ್ಕಾಧಿಕಾರಿಯನ್ನಾಗಿ ನೇಮಿಸುವುದು ಸಂಬಂಧಪಟ್ಟ ಇಲಾಖೆಗಳ ಕರ್ತವ್ಯವಾಗಿರುತ್ತದೆ.

6. ಕಾರ್ಯಾಚರಣೆಯಲ್ಲಿ ತೊಡಗಿರುವ ಭದ್ರತಾ ಸಿಬ್ಬಂದಿಗಳಿಗೆ ಬಾಧಿತರಾದ ವ್ಯಕ್ತಿಗಳಿಗೆ ಹಾಗೂ ಒತ್ತೆಯಾಳುಗಳಿಗೆ ನೀರು, ಆಹಾರ ಮುಂತಾದವುಗಳನ್ನು ಒದಗಿಸುವ ಉದ್ದೇಶಕ್ಕಾಗಿ ಘಟಕಾಧಿಕಾರಿಯು ಒಬ್ಬ ಸಂಪರ್ಕಾಧಿಕಾರಿಯನ್ನು ನೇಮಿಸತಕ್ಕದ್ದು.

7. ಕಾರ್ಯಾಚರಣೆಗೆ ಸಂಬಂಧಿಸಿದ ಎಲ್ಲಾ ಮಾಹಿತಿಯನ್ನು ನಿಯಂತ್ರಣಾ ಕೇಂದ್ರಕ್ಕೆ ಘಟಕಾಧಿಕಾರಿಯು ನೀಡುತ್ತಿರತಕ್ಕದ್ದು. ಹಾಗೆಯೇ ಈ ಕೃತ್ಯಗಳಿಂದ ಬಾಧಿತರಾದವರ ಸಂಬಂಧಿಕರಿಗೆ ವಿಷಯವನ್ನು ತಿಳಿಸುವ ಹಾಗೂ ಬಾಧಿತ ವ್ಯಕ್ತಿಗಳನ್ನು ಆಸ್ಪತ್ರೆಗೆ ದಾಖಲಿಸುವುದು ಮತ್ತು ಸಂಬಂಧಿಸಿದ ಅವಶ್ಯಕತೆಗಳ ಬಗ್ಗೆ ಸಮನ್ವಯ ಮಾಡುವುದು ಅವರ ಜವಾಬ್ದಾರಿಯಾಗಿರುತ್ತದೆ.

8. ಗಾಯಾಳುಗಳನ್ನು ದಾಖಲಿಸಿರುವ ಆಸ್ಪತ್ರೆಯ ಕಾರ್ಯಗಳಿಗೆ ಅಡ್ಡಿಯಾಗದಂತೆ ಸದರಿ ಆಸ್ಪತ್ರೆಗಳಿಗೆ ಸಾಕಷ್ಟು ಭದ್ರತೆಯನ್ನು ಘಟಕಾಧಿಕಾರಿಯು ಒದಗಿಸತಕ್ಕದ್ದು.

9. ಹೆಚ್ಚಿನ ಸಂಖ್ಯೆಯ ಜನರು ಸೇರುವ ಸ್ಥಳವಾದ ಹಾಗೂ ದೊಡ್ಡ ಹೋಟೇಲುಗಳು ಮಾರ್ಕೆಟ್ ಪ್ರದೇಶ ಇವುಗಳ ಮುಖ್ಯಸ್ಥರನ್ನು ಘಟಕಾಧಿಕಾರಿಯು ಎಚ್ಚರಿಸತಕ್ಕದ್ದು ಅದರಲ್ಲೂ ಭಯೋತ್ಪಾದಕರು ಆಗಾಗ ಗುರಿಯಾಗಿಸುವ ಕೆಲವು ದೇಶದ ಪ್ರಜೆಗಳನ್ನು ಆಕರ್ಷಿಸುವ ಹೋಟೇಲ್‌ಗಳ ಬಗ್ಗೆ ವಿಶೇಷ ಗಮನಹರಿಸತಕ್ಕದ್ದು.

10. ಎಲ್ಲಾ ಇಲಾಖಾ ಮುಖ್ಯಸ್ಥರು ಅಥವಾ ಸಂಬಂಧಪಟ್ಟ ಅಧಿಕಾರಿಗಳು ಮೇಲಿನ ಕಾರ್ಯಾಚರಣೆಗೆ ಸಂಬಂಧಿಸಿದ ಎಲ್ಲಾ ಸಿಬ್ಬಂದಿಗಳನ್ನು ರಜೆಯಿಂದ ಹಿಂದಕ್ಕೆ ಕರೆಸತಕ್ಕದ್ದು.

11. ಜನ ಮತ್ತು ಸಾಮಗ್ರಿಗಳನ್ನು ಕಾರ್ಯಾಚರಣೆಯ ಸ್ಥಳಕ್ಕೆ ಸಾಗಿಸಲು ಹಾಗೂ ಗಾಯಾಳುಗಳನ್ನು ಸದರಿ ಸ್ಥಳದಿಂದ ಸ್ಥಳಾಂತರಿಸಲು ಡಿ.ಜಿ. ಮತ್ತು ಐ.ಜಿ.ಪಿ. ರವರು ಅಲ್ಪಾವಧಿ ಸೂಚನೆ ನೀಡಿ ಏರ್‌ಕ್ರಾಫ್ಟ್/ಹೆಲಿಕಾಪ್ಟರ್ ಅನ್ನು ಕರೆಸಲು ಅಧಿಕಾರ ಹೊಂದಿರುತ್ತಾರೆ. ಬಾಡಿಗೆ ವೆಚ್ಚವನ್ನು ಪೊಲೀಸ್ ಫಂಡ್‌ನಿಂದ ಭರಿಸಬಹುದು.

12. ಭಾದಿತ ವ್ಯಕ್ತಿಗಳಿಗೆ ಸಂಬಂಧಿಸಿದ ಎಲ್ಲಾ ಮಾಹಿತಿಯನ್ನು ಹಾಗೂ ಅವರ ವಿಳಾಸಗಳು ಮತ್ತು ಇತ್ತೀಚಿನ ಬೆಳವಣಿಗೆಗಳ ಬಗ್ಗೆ ಮಾಹಿತಿಯನ್ನು ಸಾರ್ವಜನಿಕರಿಗೆ ಘಟಕಾಧಿಕಾರಿಗಳು ಒದಗಿಸತಕ್ಕದ್ದು.

13. ಡಿ.ಜಿ. ಮತ್ತು ಐ.ಜಿ.ಪಿ. ರವರು ಇತ್ತೀಚಿನ ಬೆಳವಣಿಗೆಗಳ ಬಗ್ಗೆ ಆಗಿಂದಾಗ್ಗೆ ಮಾಧ್ಯಮಗಳಿಗೆ ಮಾಹಿತಿ ನೀಡತಕ್ಕದ್ದು ಅಥವಾ ಅವರು ಕಾರ್ಯಾಚರಣೆಯಲ್ಲಿ ನಿರತರಾಗಿದ್ದರೆ ಅವರ ಆಯ್ಕೆಯ ಯಾವುದೇ ಅಧಿಕಾರಿಯನ್ನು ಈ ಕೆಲಸ ನಿರ್ವಹಿಸಲು ನೇಮಿಸಬಹುದು.

14. ಡಿ.ಜಿ. ಮತ್ತು ಐ.ಜಿ.ಪಿ. ರವರು ಪ್ರತಿ ವರ್ಷ ಎರಡು ಅಥವಾ ಮೂರು ಅಣಕು ಕವಾಯತನ್ನು ನಡೆಸಬೇಕು ಮತ್ತು ಅವುಗಳಲ್ಲಿ ಒಂದಾದರೂ ಬೆಂಗಳೂರು ನಗರದಲ್ಲಿ ನಡೆಸಬೇಕು. ಈ ಉದ್ದೇಶಕ್ಕಾಗಿ ಎಲ್ಲಾ ಇಲಾಖೆಗಳು ಮತ್ತು ಸಂಬಂಧಪಟ್ಟ ಅಧಿಕಾರಿಗಳು ಅಗತ್ಯವಿರುವ ಎಲ್ಲಾ ಬೆಂಬಲವನ್ನು ಹಾಗೂ ಪೂರ್ಣ ಸಹಕಾರವನ್ನು ನೀಡಬೇಕು. ಅಣಕು ಕವಾಯತ್ತಿನ ವೆಚ್ಚವನ್ನು ಪೊಲೀಸ್ ಫಂಡ್‌ನಿಂದ ಭರಿಸಬಹುದು.

15. ಘಟಕಾಧಿಕಾರಿಗಳು ಅವರ ಆಂತರಿಕ ಭದ್ರತಾ ಯೋಜನೆಗಳನ್ನು ಈ ಸರ್ಕಾರಿ ಆದೇಶದಲ್ಲಿ ನಿರೂಪಿತ ಪ್ರಕ್ರಿಯೆಗಳಿಗೆ ಹೊಂದಾಣಿಕೆಯಾಗುವಂತೆ ಮಾರ್ಪಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ.ಸಿ. ಸಿದ್ದಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿಆರ್–244

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಆರ್. ಎಂ. ಗಂಜಿಗಟ್ಟಿ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗಂಗಾವತಿರವರ ಜನ್ಮ ದಿನಾಂಕ ತಿದ್ದುಪಡಿ ಪ್ರಕರಣದ ವಿಚಾರಣೆಯ ಮಂಡನಾಧಿಕಾರಿಯ ಬದಲಾವಣೆ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ :ಒಇ 37 ಪಿಪಿಇ 2009, ದಿನಾಂಕ 01–04–2009

2) ಕಾನೂನು ಇಲಾಖೆಯ ಟಿಪ್ಪಣಿ ಸಂಖ್ಯೆ : ಲಾ 1 ಜದಿವಿ 2009 ದಿನಾಂಕ : 24–11–2009

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 01–04–2009ರ ಸರ್ಕಾರದ ಆದೇಶದಲ್ಲಿ ಶ್ರೀ ಆರ್. ಎಂ. ಗಂಜಿಗಟ್ಟಿ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗಂಗಾವತಿರವರ ಜನ್ಮ ದಿನಾಂಕವನ್ನು ತಿದ್ದುಪಡಿ ಮಾಡುವ ಕುರಿತು ಪ್ರಕರಣದ ವಿಚಾರಣೆಯಲ್ಲಿ ಒಳಾಡಳಿತ ಇಲಾಖೆಯ ಪರವಾಗಿ ಪ್ರಕರಣವನ್ನು

ಮಂಡಿಸಲು ಮತ್ತು ವಾದವನ್ನು ವಿಚಾರಣಾಧಿಕಾರಿಯ ಮುಂದೆ ಮಂಡಿಸಲು ಶ್ರೀ ಎಂ.ಬಿ. ಚಂದ್ರಶೇಖರ್, ಸರ್ಕಾರದ ಅಧೀನ ಕಾರ್ಯದರ್ಶಿ(ವ್ಯಾಜ್ಯಗಳು) ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಕಾನೂನು ಇಲಾಖೆಯ ದಿನಾಂಕ : 24–11–2009ರ ಟಿಪ್ಪಣಿಯಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಯನ್ವಯ ಎಂ.ಬಿ. ಚಂದ್ರಶೇಖರ್‌ರವರು ವರ್ಗಾವಣೆಗೊಂಡಿರುವುದರಿಂದ ಕಾನೂನು ಇಲಾಖೆಯ ಮತ್ತೊಬ್ಬ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ನೇಮಿಸುವಂತೆ ವಿಚಾರಣಾಧಿಕಾರಿಯು ಸೂಚಿಸಿರುತ್ತಾರೆ.

ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರೊಡನೆ ಸಮಾಲೋಚಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 37 ಪಿಪಿಇ 2009, ಬೆಂಗಳೂರು, ದಿನಾಂಕ 21ನೇ ಜನವರಿ 2010**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ, ಶ್ರೀ ಆರ್. ಎಂ. ಗಂಜಿಗಟ್ಟಿ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗಂಗಾವತಿರವರ ಜನ್ಮ ದಿನಾಂಕ ತಿದ್ದುಪಡಿ ಪ್ರಕರಣದ ವಿಚಾರಣೆಗೆ ಶ್ರೀ ಎಂ.ಬಿ. ಚಂದ್ರಶೇಖರರವರ ಸ್ಥಾನದಲ್ಲಿ ಶ್ರೀ ಶ್ರೀಧರ್ ಗೋಪಾಲ ಕೃಷ್ಣಭಟ್, ಸರ್ಕಾರದ ಅಧೀನ ಕಾರ್ಯದರ್ಶಿ (ವ್ಯಾಜ್ಯಗಳು), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

(ಕೆ.ಸಿ. ಸಿದ್ದಪ್ಪ)
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿಆರ್–245

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಸ್.ಆರ್. ಶಿಂಧೆ, ಸಹಾಯಕ ಅಭಿಯೋಗ ನಿರ್ದೇಶಕರು, ಬಿಜಾಪುರ ಇವರ ಜನ್ಮ ದಿನಾಂಕ ತಿದ್ದುಪಡಿ ಪ್ರಕರಣದ ವಿಚಾರಣೆಯ ಮಂಡನಾಧಿಕಾರಿಯ ಬದಲಾವಣೆ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ :ಒಇ 76 ಪಿಪಿಇ 2008, ದಿನಾಂಕ 09–03–2009
2) ಕಾನೂನು ಇಲಾಖೆಯ ಟಿಪ್ಪಣಿ ಸಂಖ್ಯೆ : ಲಾ 5 ಜದಿವಿ 2009 ದಿನಾಂಕ : 23–11–2009

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 09—03–2009ರ ಸರ್ಕಾರದ ಆದೇಶದಲ್ಲಿ ಶ್ರೀ ಎಸ್.ಆರ್. ಶಿಂಧೆ, ಸಹಾಯಕ ಅಭಿಯೋಗ ನಿರ್ದೇಶಕರು, ಬಿಜಾಪುರರವರ ಜನ್ಮ ದಿನಾಂಕವನ್ನು ತಿದ್ದುಪಡಿ ಮಾಡುವ ಕುರಿತ ಪ್ರಕರಣದ ವಿಚಾರಣೆಯಲ್ಲಿ ಒಳಾಡಳಿತ ಇಲಾಖೆಯ ಪರವಾಗಿ ಪ್ರಕರಣವನ್ನು ಮಂಡಿಸಲು ಮತ್ತು ವಾದವನ್ನು ವಿಚಾರಣಾಧಿಕಾರಿಯ ಮುಂದೆ ಮಂಡಿಸಲು ಶ್ರೀ ಜಿ.ಎ. ಮೂಲಿಮನಿ, ಸಹಾಯಕ ವಾದೇಕ್ಷಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಕಾನೂನು ಇಲಾಖೆಯ ದಿನಾಂಕ 23–11–2009ರ ಟಿಪ್ಪಣಿಯಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಯನ್ವಯ ಶ್ರೀ ಜಿ.ಎ. ಮೂಲಿಮನಿರವರು ವರ್ಗಾವಣೆಗೊಂಡಿರುವುದರಿಂದ ಕಾನೂನು ಇಲಾಖೆಯ ಮತ್ತೊಬ್ಬ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ನೇಮಿಸುವಂತೆ ವಿಚಾರಣಾಧಿಕಾರಿಯು ಸೂಚಿಸಿರುತ್ತಾರೆ.

ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರೊಡನೆ ಸಮಾಲೋಚಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 76 ಪಿಪಿಇ 2008, ಬೆಂಗಳೂರು, ದಿನಾಂಕ 21ನೇ ಜನವರಿ 2010**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ ಶ್ರೀ ಎಸ್.ಆರ್. ಶಿಂಧೆ, ಸಹಾಯಕ ಅಭಿಯೋಗ ನಿರ್ದೇಶಕರು, ಬಿಜಾಪುರರವರ ಜನ್ಮ ದಿನಾಂಕ ತಿದ್ದುಪಡಿ ಪ್ರಕರಣದ ವಿಚಾರಣೆಗೆ ಶ್ರೀ ಜಿ. ವಿ. ಮೂಲಿಮನಿರವರ ಸ್ಥಾನದಲ್ಲಿ ಶ್ರೀ ಶ್ರೀಧರ್ ಗೋಪಾಲ ಕೃಷ್ಣಭಟ್, ಸರ್ಕಾರದ ಅಧೀನ ಕಾರ್ಯದರ್ಶಿ (ವ್ಯಾಜ್ಯಗಳು), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

(ಕೆ.ಸಿ. ಸಿದ್ದಪ್ಪ)
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿಆರ್–246

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶ್ರೀ ಎಂ. ಬಸವರಾಜು, ನೋಟರಿ ಮಳವಳ್ಳಿ ಇವರ ಅಮಾನತ್ತು ಆದೇಶ ಹಿಂಪಡೆಯುವ ಬಗ್ಗೆ

**ಓದಲಾಗಿದೆ :** 1) ಸರ್ಕಾರದ ಪತ್ರ ಸಂಖ್ಯೆ : ಲಾ 82 ಎಲ್‌ಸಿಎಲ್ 2008, ದಿನಾಂಕ 06-02-2009
2) ಶ್ರೀ ಎಂ ಬಸವರಾಜು, ಇವರ ಮನವಿ ದಿನಾಂಕ 18-02-2009
3) ಸರ್ಕಾರದ ಪತ್ರ ಸಂಖ್ಯೆ ಲಾ 82 ಎಲ್‌ಸಿಎಲ್ 2008, ದಿನಾಂಕ 21-04-2009
4) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಇವರ ಕಛೇರಿ ಪತ್ರ ಸಂಖ್ಯೆ ಮಿಸ್/ರವಾನೆ/ಸಂಖ್ಯೆ 1764/09, ದಿನಾಂಕ 25-06-2009

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 06-02-2009ರ ಆದೇಶದಲ್ಲಿ ಶ್ರೀ ಎಂ. ಬಸವರಾಜು, ನೋಟರಿ, ಮಳವಳ್ಳಿ ಇವರನ್ನು ಮಳವಳ್ಳಿ ಜೆಎಂಎಫ್‌ಸಿ ರವರ ನ್ಯಾಯಾಲಯದ ಮುಂದೆ ಇರುವ ಪ್ರಕರಣ ಸಂಖ್ಯೆ ಸಿಸಿ 504/08 ತೀರ್ಮಾನ ಆಗುವವರೆಗೆ ನೋಟರಿ ಕರ್ತವ್ಯ ನಿರ್ವಹಿಸದಂತೆ ನೋಟರಿ ನಿಯಮ 13(12)(ಬಿ) (ii) ರನ್ವಯ ಅಮಾನತ್ತಿನಲ್ಲಿ ಇಡಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ದಿನಾಂಕ 18-02-2009ರ ಮನವಿಯಲ್ಲಿ ಶ್ರೀ ಎಂ. ಬಸವರಾಜು, ನೋಟರಿ, ಮಳವಳ್ಳಿ ಇವರು ಮಳವಳ್ಳಿ ಜೆಎಂಎಫ್‌ಸಿ ನ್ಯಾಯಾಲಯದಲ್ಲಿನ ಪ್ರಕರಣ ಸಿಸಿ 504/08 ದಿನಾಂಕ 17-02-2009 ರಂದು ರಾಜಿಸಂಧಾನದ ಮೂಲಕ ವಜಾ ಆಗಿರುವುದರಿಂದ ಅಮಾನತ್ತು ಆದೇಶ ಹಿಂತೆಗೆದುಕೊಂಡು/ರದ್ದುಪಡಿಸಿ ನೋಟರಿ ಕರ್ತವ್ಯ ನಿರ್ವಹಿಸಲು ಆದೇಶಿಸುವಂತೆ ಕೋರಿದ್ದರು. ಆ ಮನವಿಯನ್ನು ಮೇಲೆ (3) ರಲ್ಲಿ ಓದಲಾದ ದಿನಾಂಕ 21-04-2009ರ ಸರ್ಕಾರದ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಇವರಿಗೆ ಸಲ್ಲಿಸಿ ಅವರ ಅಭಿಪ್ರಾಯವನ್ನು ಕೋರಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ದಿನಾಂಕ 25-06-2009ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಇವರು ಶ್ರೀ ಎಂ. ಬಸವರಾಜು, ನೋಟರಿ, ಮಳವಳ್ಳಿ ಇವರಿಗೆ ಸಂಬಂಧಿಸಿದ ಸಿಸಿ ನಂ 504/08 ದಿನಾಂಕ 17-02-2009 ರಂದು ಉಭಯತ್ರರು ಕಲಂ 320(1) ಮತ್ತು (2) ಅಪರಾಧ ಪ್ರಕ್ರಿಯಾ ಸಂಹಿತೆ ಪ್ರಕಾರ ರಾಜಿ ಮಾಡಿಕೊಂಡಿದ್ದರಿಂದ ಮೊಕದ್ದಮೆಯನ್ನು ಮುಕ್ತಾಯಗೊಳಿಸಲಾಗಿದೆ ಎಂದು ವರದಿ ಮಾಡಿದ್ದಾರೆ.

ವಿಷಯವನ್ನು ಸರ್ಕಾರವು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 82 ಎಲ್‌ಸಿಎಲ್ 2008, ಬೆಂಗಳೂರು, ದಿನಾಂಕ 19ನೇ ಜನವರಿ 2010**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಎಂ. ಬಸವರಾಜು, ನೋಟರಿ, ಮಳವಳ್ಳಿ ಇವರನ್ನು ಅಮಾನತ್ತಿನಲ್ಲಿಟ್ಟ ದಿನಾಂಕ 06-02-2009 ರ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ ಮತ್ತು ನಿಯಮಾನುಸಾರ ಕರ್ತವ್ಯ ನಿರ್ವಹಿಸಲು ಅನುಮತಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

(ಹೆಚ್.ಆರ್. ಶಕುಂತಲ)
ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ-2)
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿಆರ್-247

## HOME SECRETARIAT

**Sub: Security preparedness – Related procedure –reg**

Preamble:

Whereas terrorism has become a scourge that afflicts almost every part of the country and no major city is immune from it.

Whereas terrorists have targeted some of the vital economic and technological installations across the country causing enormous damage to the nation's economy as well as to the morale of the people.

Whereas serious acts of terrorism have been reported from different parts of Karnataka and terrorists of various hues and denominations have been apprehended from within the state.

And Whereas numerous defence and scientific installations, which are critical to the nation's security and progress, are located in Bangalore City.

Wherefore, it has become imperative for the Government to take all steps that are necessary for preventing such incidents and situations and for dealing with all acts of terrorism. It is also extremely essential to put in place systems that will deal with situations of the kind mentioned above in an efficient, well orchestrated and effective manner.

It is therefore, decided to lay down the following procedures, which will facilitate such operations.

**Hence the following :**

**Government Order NO HD 118 SST 2009, Bangalore, Dated 21-01-2010**

1) In the event of any bomb blast or terrorist act being reported from any part of the State, it shall be the primary duty and responsibility of the unit officer, viz., Commissioner of Police or District Superintendent of Police, as the case may be, to inform the Director General of Police, the Additional Director General of Police, (Internal Security), the Addl. Director General of Police, Law & Order, ADGP, Intelligence, IGP, ATC (Operations), apart from the range Inspectors General of Police concerned. Further it shall be the responsibility of the ADG, Intelligence, to inform the Hon'ble Chief Minister, the Hon'ble Home Minister, the Chief Secretary, Additional Chief Secretary/Principal Secretary, Home Dept., as well as the Principal Secretary to Chief Minister.
2) Until such time that the ADG (Internal Security) IGP, ATC (operations) or any officer nominated by the ADGP, (Internal Security) takes over the operation, it shall be the responsibility of the unit officer to control the situation and deal with it in a manner that will cause the least damage to public life and property. The ADGP ( Internal Security) or the IGP, ATC (operations) or any other officer nominated by the ADG Internal Security, shall immediately summon such Commando Teams or other forces that are necessary by contacting ADGP, KSRP or IGP, KSRP.
3) Depending to the intensity and magnitude of the problem,the DGP may summon the required number of NSG Commando Teams by contacting the DG, NSG or the required number of Military Commando Teams by contacting the Commander, Karnataka & Goa Sub-Area or other officers if necessary. He will also be at liberty to requisition the required number of such personnel from any of the CPMFs that can provide the same.
4) Once the operational command is taken over by the IGP, ATC (Operations) or the officer nominated by the ADG (Internal Security), the Unit Officer viz, Commisioner of Police or the District Superintendent of Police concerned, shall continue to assist the IGP, ATC (Operations) with all necessary logistics support in terms of manpower, materials., etc., In addition it shall be the responsibility of the Unit Officer concerned to alert all the concerned hospitals to be on standby and provide the required number of ambulances and Medical Relief Teams etc. It shall also be his responsibility to make all necessary bandobust and traffic arrangements around the scene of operations with a view to preventing any melee or disorder and to ensure smooth flow of traffic. The RMO or the other hospital authorities shall make necessary emergency arrangements to cater to the needs of a large number of casualties.
5) The IGP, ATC (Operations) or any officer nominated by the ADG (Internal Security) shall requisition the services of required number of Fire Fighters, Home Guards, Civil Defence Volunteers and enlist the services of NGO's as and when required. He shall also alert the Director of Health and Family Welfare or the senior most officer of the Department based at Bangalore or the District Headquarters as the case may be. He shall also alert the officials of the Power Supply Company to ensure that there is uninterrupted power supply and also to disconnect power supply if and when required. In such an event, it shall be the duty of the

concerned department officials to extend all possible assistance to the Police and also to nominate a senior officer of the department as the Liaison Officer who shall be available at all times until after a formal declaration, of the operation being over, is made.

6) The Unit Officer shall nominate a Liaison Officer who shall be able to provide food, water, etc., to the security personnel who are involved in the operations as well as to the victims and hostages if any.

7) The Unit Officer shall keep the Control Room posted of all information related to the operation. Similarly it is his responsibility to inform the relatives of the victims and co-ordinate the hospitalisation of the victims and other related needs.

8) The Unit Officer shall provide adequate security to the Hospitals where the injured persons are admitted, so that the hospitals can function without interruption.

9) The Unit Officers shall alert the Heads of all the various sensitive installations as well as big Hotels and Market Places where large number of people gather. Particular attention should be paid to hotels which attract nationals of certain countries whom the terrorists often target.

10) The Heads of departments or the authorities concerned shall recall from leave all personnel who are relevant to the above mentioned operations.

11) The Director General & Inspector General of Police is empowered to requisition the services of Aircraft/ Helicopter at short notice for transporting men and material to the scene of operations as well as to shift injured persons from such scenes. The cost of hiring shall be met out of police funds.

12) The Unit Officers shall also make available to public all information relating to victims and their addresses and the latest developments.

13) The Director General & Inspector General of Police shall from time to time brief the media on the latest developments and /or authorise any officer of his choice to do the same if he is engaged in operations.

14) The Director General & Inspector General of Police shall conduct two or more mock drills in a year and at least one of them should be held in Bangalore city. All the departments and officials concerned shall extend all the necessary support and full co-operation for this purpose . The cost of the mock drills shall be met out of police funds.

15) The Unit Officers concerned are advised to modify their Internal Security Schemes in such a manner as to bring them in conformity with the procedure laid down in this Government Order.

By Order and in the name of the Governor of Karnataka

(**K.C. Siddappa)**

Under Secretary to Government

Home Department

(Law and order, COFEPOSA and Prosecution)

PR NO. 248

## ಇಂಧನ ಸಚಿವಾಲಯ

**ವಿಷಯ :** ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಕೇಂದ್ರ ಕಛೇರಿಯನ್ನು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಿಂದ ಬೇರೆ ಕಟ್ಟಡಕ್ಕೆ ಸ್ಥಳಾಂತರಿಸಲು ಹಾಗೂ ಸ್ಥಳಾಂತರಿಸುವ ಕಟ್ಟಡಕ್ಕೆ ಬಾಡಿಗೆ ನಿಗಧಿಪಡಿಸುವ ಬಗ್ಗೆ

**ಓದಲಾಗಿದೆ :** 1) ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ಸಿಸ4/28393/09-10, ದಿನಾಂಕ : 16-12-2009

2) ಕಾರ್ಯಪಾಲಕ ಅಭಿಯಂತರರು, ನಂ.1 ಕಟ್ಟಡಗಳ ವಿಭಾಗ ಬೆಂಗಳೂರು ಇವರ ಪತ್ರ ದಿನಾಂಕ : 01-12-2009

3) ವ್ಯವಸ್ಥಾಪಕರ ಕೋ-ಮಾಲೀಕರು, ಮೆ: ಪಾಲ್ ಅಸೋಸಿಯೇಟ್ಸ್ ರವರ ಪತ್ರ ದಿನಾಂಕ: 11-12-2009

4) ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ಸಿಸ4/ಬಾಡಿಗೆ ಕಟ್ಟಡ/31917/09-10, ದಿನಾಂಕ : 06-01-2010

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು, ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಕೇಂದ್ರ ಕಛೇರಿ, ಮೈಶುಗರ್ ಕಟ್ಟಡ, ಜೆ.ಸಿ. ರಸ್ತೆ, ಬೆಂಗಳೂರು ಇಲ್ಲಿ ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಕಟ್ಟಡದಿಂದ ಬೇರೆ ಕಟ್ಟಡಕ್ಕೆ ಸ್ಥಳಾಂತರಿಸಲು ಉದ್ದೇಶಿಸಿದ್ದು, ಸರ್ಕಾರದ ಅನುಮೋದನೆ ಕೋರಿರುತ್ತಾರೆ. ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಕಟ್ಟಡದಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಇದ್ದು, ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿ/ಅಧಿಕಾರಿಗಳಿಗೆ ನಿರ್ಮಲ ವಾತಾವರಣ ಮತ್ತು ಆರೋಗ್ಯದ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಮೆ: ಪಾಲ್ ಅಸೋಸಿಯೇಟ್ಸ್ ರವರ ಕಟ್ಟಡ ನಂ 32/1 ಮತ್ತು 2, ಎರಡನೇ ಮಹಡಿ ಕ್ರೆಸೆಂಟ್ ಟವರ್ಸ್ ಕ್ರೆಸೆಂಟ್ ರಸ್ತೆ, ಬೆಂಗಳೂರು -560001 ಈ ಕಟ್ಟಡದಲ್ಲಿ ಸ್ಥಳಾವಕಾಶವನ್ನು ಗುರುತಿಸಲಾಗಿದ್ದು, ಒಟ್ಟು 9802.05 ಚದರ ಅಡಿಗಳ ವಿಸ್ತೀರ್ಣವಿರುವುದಾಗಿ ತಿಳಿಸುತ್ತಾ, ಸದರಿ ಕಟ್ಟಡವು ಕಛೇರಿ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಯೋಗ್ಯವಾಗಿದ್ದು ಬ್ಯಾಂಕ್/ಖಜಾನೆ ಇನ್ನಿತರ ವ್ಯವಹಾರಗಳಿಗೆ ಸಮೀಪವಿದ್ದು, ಯೋಗ್ಯ ವಾತಾವರಣವಿರುವುದೆಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕಾರ್ಯಪಾಲಕ ಅಭಿಯಂತರರು, ನಂ1, ಕಟ್ಟಡಗಳ ವಿಭಾಗ, ಬೆಂಗಳೂರು ಇವರು ಕಟ್ಟಡದ ಸ್ಥಳ ಪರಿವೀಕ್ಷಣೆ ನಡೆಸಿ ಪ್ರತಿ ಚದರ ಅಡಿಗೆ ರೂ. 19.34 ರಂತೆ ಬಾಡಿಗೆ ನಿಗಧಿಪಡಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ವ್ಯವಸ್ಥಾಪಕರು ಹಾಗೂ ಕೋ ಮಾಲಿಕರು ಆದ ಶ್ರೀ ಕೆ.ಎಸ್. ನಂದಕುಮಾರ್ ಮೆ: ಪಾಲ್ ಅಸೋಸಿಯೇಟ್ಸ್ , ನಂ 32/1 ಮತ್ತು 2 ಕ್ರೆಸೆಂಟ್ ಟವರ್ಸ್ ಕ್ರೆಸೆಂಟ್ ರಸ್ತೆ, ಬೆಂಗಳೂರು-560001, ಇಲ್ಲಿ ಕಾರ್ಯಪಾಲಕ ಅಭಿಯಂತರರು ನಿಗಧಿಪಡಿಸಿರುವ ಪ್ರತಿ ಚದರ ಅಡಿಯ ದರ 19.34 ರಂತೆ ಕಟ್ಟಡವನ್ನು ಬಾಡಿಗೆಗೆ ನೀಡಲು ಒಪ್ಪಿಗೆ ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರಕ್ಕೆ ಸಂಬಂಧಿಸಿದಂತೆ ಮುಖ್ಯ ವಿದ್ಯುತ್ ಪರಿವೀಕ್ಷಕರು ಮತ್ತು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ರವರು ದಿನಾಂಕ: 26-12-2009 ರಂದು ಸ್ಥಳ ಪರಿವೀಕ್ಷಣೆ ನಡೆಸಿ ಪುರುಷರಿಗೆ/ಮಹಿಳೆಯರಿಗೆ ಪ್ರತ್ಯೇಕ ಶೌಚಾಲಯಗಳನ್ನು ನಿರ್ಮಿಸಿಕೊಂಡುವಂತೆ ಕಟ್ಟಡ ಮಾಲಿಕರಿಗೆ ತಿಳಿಸಿದ್ದು, ಅದಕ್ಕೆ ಕಟ್ಟಡದ ಮಾಲೀಕರು ಒಪ್ಪಿಗೆ ಸೂಚಿಸಿರುತ್ತಾರೆ. ಒಟ್ಟು ಫ್ಲಿಂತ್ ವಿಸ್ತೀರ್ಣ 8368.5 ಚದರ ಅಡಿ ಸ್ಥಳಾವಕಾಶಕ್ಕೆ ಮಾತ್ರ ಲೋಕೋಪಯೋಗಿ ಇಲಾಖೆಯವರು ನಿಗಧಿಪಡಿಸಿರುವ ದರ ಪ್ರತಿ ಚದರ ಅಡಿಗೆ 19.34 ರಂತೆ ಒಟ್ಟು ಮಾಸಿಕ ಬಾಡಿಗೆ ರೂ. 1,61,847/- ಪಾವತಿಸುವಂತೆ ಕೋರುತ್ತಾ, 1000 ಚದರ ಅಡಿಗಳಷ್ಟು ವಿಸ್ತೀರ್ಣದ ಸ್ಥಳಾವಕಾಶವನ್ನು ಉಚಿತವಾಗಿ ನೀಡಲು ಕಟ್ಟಡದ ಮಾಲೀಕರು ಒಪ್ಪಿರುವುದಾಗಿ ತಿಳಿಸಿ ಸರ್ಕಾರದ ಅನುಮೋದನೆಯನ್ನು ಮುಖ್ಯ ವಿದ್ಯುತ್ ಪರಿವೀಕ್ಷಕರು ಕೋರಿರುತ್ತಾರೆ.

ಮುಖ್ಯ ವಿದ್ಯುತ್ ಪರಿವೀಕ್ಷಕರು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಕಟ್ಟಡದಿಂದ ಕಛೇರಿಯನ್ನು ಮೆ: ಪಾಲ್ ಅಸೋಸಿಯೇಟ್ಸ್ ನಂ. 32/1 ಮತ್ತು 2 ಕ್ರೆಸೆಂಟ್ ಟವರ್ಸ್ ಕ್ರೆಸೆಂಟ್ ರಸ್ತೆ, ಬೆಂಗಳೂರು-560001, ಇಲ್ಲಿಗೆ ಸ್ಥಳಾಂತರಿಸಲು ಉದ್ದೇಶಿಸಿರುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ:-

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 156 ಇಬಿಎಸ್ 2009, ಬೆಂಗಳೂರು, ದಿನಾಂಕ 21ನೇ ಜನವರಿ 2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ ಮೈಶುಗರ್ ಕಟ್ಟಡ, ನೆಲಮಹಡಿ, ಜೆ.ಸಿ. ರಸ್ತೆ ಬೆಂಗಳೂರು-560002, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಕಛೇರಿಯನ್ನು ಫ್ಲಿಂತ್ ವಿಸ್ತೀರ್ಣ 8368.5 ಚದರ ಅಡಿಯಿರುವ ಮೆ: ಪಾಲ್ ಅಸೋಸಿಯೇಟ್ಸ್ ನಂ. 32/1 ಮತ್ತು 2, 2ನೇ ಮಹಡಿ, ಕ್ರೆಸೆಂಟ್ ಟವರ್ಸ್

ಕ್ರೆಸೆಂಟ್ ರಸ್ತೆ, ಬೆಂಗಳೂರು-560001, ಇಲ್ಲಿಗೆ ಮಾಸಿಕ ಬಾಡಿಗೆ ರೂ. 1,61,847/- ರಂತೆ ನಿಗಧಿಪಡಿಸಿ ಸ್ಥಳಾಂತರಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಲಾಗಿದೆ.

1. ಈ ಸಂಬಂಧ ತಗಲುವ ವೆಚ್ಚವನ್ನು ಆಯವ್ಯಯದಲ್ಲಿ ಹಾಲಿ ಲಭ್ಯವಿರುವ ಅನುದಾನದಲ್ಲಿ ಭರಿಸಿಕೊಳ್ಳತಕ್ಕದ್ದು.
2. ಒಂದು ವೇಳೆ ಅನುದಾನದ ಕೊರತೆಯಾದಲ್ಲಿ ಪೂರಕ ಅಂದಾಜಿನಲ್ಲಿ ಅನುದಾನವನ್ನು ಒದಗಿಸಲು ನಿಗಧಿತ ಸಮಯದಲ್ಲಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10-07-1996 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ ರವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

(ಸುಜಾತಮ್ಮ)
ಪೀಠಾಧಿಕಾರಿ, ಇಂಧನ ಇಲಾಖೆ

ಪಿಆರ್-249

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ ಬಳ್ಳಾರಿ ಜಿಲ್ಲೆಯ ಒಬ್ಬ ಜೀತವಿಮುಕ್ತ ಬಾಲಕಿಗೆ 2009-10ನೇ ಸಾಲಿನಲ್ಲಿ ಸಹಾಯಧನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ.15.ಆರ್‌ಬಿಎಲ್. 2004 ದಿನಾಂಕ. 21-01-2006
2) ಬಳ್ಳಾರಿ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯ ಪತ್ರ ಸಂ. ಜಿಪಂಬ : ಅಬಿ(1) ಆರ್‌ಬಿಎಲ್./48 2009-10 ದಿನಾಂಕ 22-09-2009

**ಪ್ರಸ್ತಾವನೆ :**

ಜೀತಕಾರ್ಮಿಕರನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ನಂತರ, ಅವರುಗಳಿಗೆ ಕನಿಷ್ಠ ಆರ್ಥಿಕ ಸವಲತ್ತನ್ನು ಒದಗಿಸುವ ಉದ್ದೇಶದಿಂದ ರಾಜ್ಯ ಸರ್ಕಾರವು ಜೀತವಿಮುಕ್ತರ ಪುನರ್ವಸತಿ ಸಹಾಯಧನ ಎಂಬ ಹೊಸ ಯೋಜನೆಯನ್ನು ರೂಪಿಸಿದ್ದು, ದಿನಾಂಕ 21-1-2006ರಿಂದ ಈ ಯೋಜನೆಯನ್ನು ರಾಜ್ಯಾದ್ಯಂತ ಜಾರಿಗೆ ತರಲಾಗಿದೆ. ಈ ಯೋಜನೆಯಡಿ ರೂಪಿಸಿರುವ ನಿರ್ದೇಶನದಂತೆ ದಿನಾಂಕ 21-1-2006 ರ ತರುವಾಯ ಜೀತಪದ್ಧತಿಯಿಂದ ಬಿಡುಗಡೆಗೊಳಿಸುವ ರಾಜ್ಯದ ಪ್ರತಿ ಜೀತ ಕಾರ್ಮಿಕ/ಬಾಲ ಜೀತಕಾರ್ಮಿಕರಿಗೆ ಮಾಹೆಯಾನ ರೂ. 300.00 ರಂತೆ ಸಹಾಯಧನವನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ದಿನದಿಂದ ಮೊದಲ 24 ತಿಂಗಳುಗಳ ಅವಧಿಗೆ ಪಾವತಿಸಬೇಕಾಗುತ್ತದೆ.

2. ಬಳ್ಳಾರಿ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ಮೇಲೆ ಓದಲಾದ ಕ್ರ.ಸಂ.(2)ರ ಪತ್ರದಲ್ಲಿ ಬಳ್ಳಾರಿ ಜಿಲ್ಲೆಯ, ರಾಮನಗರ ಹಗರಿಬೊಮ್ಮನಹಳ್ಳಿಯ ಜೀತದಾಳು ಬಾಲಕಿ ಕು. ಯಮುನ ತಂದೆ ಟಿ. ಕೊಟ್ರೇಶ್ ಇವರನ್ನು ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕು ಅನಂತಯ್ಯನಗುಡಿ ಗ್ರಾಮದ ನಿಕೀಲ್ ಕೋಳಿ ಫಾರಂನಲ್ಲಿ ಮಾಲೀಕರಾದ ಶ್ರೀ. ಸೂರ್ಯನಾರಾಯಣ ಎಂಬುವರು ರೂ. 25,000/- ಗಳಿಗೆ ಒತ್ತೆಯಾಳಾಗಿ ಇರಿಸಿಕೊಂಡಿರುವ ಬಗ್ಗೆ ಪತ್ತೆ ಹಚ್ಚಿ ಜೀತದಾಳು ವಿಮೋಚನಾ ಕಾಯಿದೆ 1976ರಡಿ ತಪ್ಪಿತಸ್ಥರ ವಿರುದ್ಧ ಪ್ರಕರಣ ದಾಖಲಿಸಿಕೊಂಡು ಹೊಸಪೇಟೆ ತಾಲ್ಲೂಕಿನ ಉಪ ವಿಭಾಗೀಯ ದಂಡಾಧಿಕಾರಿರವರು ದಿನಾಂಕ 26-03-2009ರಂದು ಜೀತಪದ್ಧತಿಯಿಂದ ವಿಮುಕ್ತಿಗೊಳಿಸಿ ಜೀತವಿಮುಕ್ತ ಪ್ರಮಾಣಪತ್ರವನ್ನು ಹೊರಡಿಸಿರುವುದನ್ನು ತಿಳಿಸುತ್ತಾ ಸದರಿಯವರ ಕುಟುಂಬಕ್ಕೆ ಪುನರ್ ವಸತಿ ಕಲ್ಪಿಸಲು ಕೋರಿರುತ್ತಾರೆ. ಆದುದರಿಂದ, ಬಳ್ಳಾರಿ ತಾಲ್ಲೂಕಿನ ಮೇಲ್ಕಂಡ ಒಬ್ಬ ಜೀತದಾಳು ಬಾಲಕಿಗೆ ಈ ಯೋಜನೆಯಡಿ ಪ್ರಸಕ್ತ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2230-01-198-6-01-300 ಅಡಿಯಲ್ಲಿ ಲಭ್ಯವಿರುವ ಅನುದಾನದಲ್ಲಿ, 2009 ಏಪ್ರಿಲ್ ಮಾಹೆಯಿಂದ 2010 ಮಾರ್ಚಿ ಮಾಹೆಯ ವರೆಗಿನ ಒಟ್ಟು 12 ತಿಂಗಳ ಅವಧಿಗೆ ಮಾಹೆಯಾನ ರೂ. 300/- ರಂತೆ ಸಹಾಯಧನಕ್ಕಾಗಿ ತಗಲುವ ರೂ. 3600/- ಗಳ ಅನುದಾನವನ್ನು ಬಳ್ಳಾರಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿರುತ್ತದೆ. ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ. 1. ಆರ್‌ಬಿಎಲ್ 2009, ಬೆಂಗಳೂರು, ದಿನಾಂಕ 20ನೇ ಜನವರಿ 2010**

ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆ ಅಡಿ ಬಳ್ಳಾರಿ ಜಿಲ್ಲೆಯ ರಾಮನಗರ, ಹಗರಿ ಬೊಮ್ಮನಹಳ್ಳಿಯ ಒಬ್ಬ ಜೀತವಿಮುಕ್ತ ಬಾಲಕಿಗೆ 2009-10ನೇ ಸಾಲಿನ 12 ತಿಂಗಳ (2009 ಏಪ್ರಿಲ್ ಇಂದ 2010ರ ಮಾರ್ಚಿವರೆಗೆ) ಅವಧಿಗೆ ಮಾಹೆಯಾನ ರೂ. 300.00 ರಂತೆ ಸಹಾಯಧನ ಪಾವತಿಸಲು ಒಟ್ಟು ರೂ. 3600-00 (ಮೂರು ಸಾವಿರದ ಆರು ನೂರು ರೂಪಾಯಿಗಳು ಮಾತ್ರ) ಗಳನ್ನು ಬಳ್ಳಾರಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

2 ಈ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230– ಕಾರ್ಮಿಕ ಮತ್ತು ಉದ್ಯೋಗ–01–ಕಾರ್ಮಿಕ–198–ಗ್ರಾಮ ಪಂಚಾಯತಿಗಳಿಗೆ ಸಹಾಯ –6–ಗ್ರಾಮ ಪಂಚಾಯತಿಗಳು–ಕೇಂದ್ರ ಪುರಸ್ಕೃತ ಯೋಜನೆ (ಜೀತದಾಳುಗಳ ಪುನರ್ವಸತಿ)–01 ಬ್ಲಾಕ್ ಅನುದಾನ–300 ಒಟ್ಟು ಜಿಲ್ಲಾ ಪಂಚಾಯತಿ (ಯೋಜನೆ) ಗೆ ಜಮಾ ಮಾಡತಕ್ಕದ್ದು.

3 ಸರ್ಕಾರದ ಆದೇಶ ಸಂ. ಗ್ರಾಅಪ. 15 ಆರ್‌ಬಿಎಲ್. 2004 ದಿನಾಂಕ 21–1–2006 ರಲ್ಲಿನ ಎಲ್ಲಾ ಮಾರ್ಗ ಸೂಚಿಗಳನ್ನು ತಪ್ಪದೇ ಪಾಲಿಸತಕ್ಕದ್ದು.

4 ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂ. ಗ್ರಾಅಪ 312 ಪಿಬಿಎಸ್. 2009 ದಿನಾಂಕ 19–01–2010 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

(ಡಾ. ಪಿ.ಸಿ. ಜಾಫರ್)
ನಿರ್ದೇಶಕರು
ಯೋಜನೆ ಸಮನ್ವಯ ಹಾಗೂ ಮೌಲ್ಯಮಾಪನ ಘಟಕ
ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿಆರ್–250

**ಕಂದಾಯ ಸಚಿವಾಲಯ**

**ತಿದ್ದುಪಡಿ**

**ಆರ್.ಡಿ: 46/ಎಡಿಇ/2007 (ಭಾಗ) ಬೆಂಗಳೂರು, ದಿನಾಂಕ: 19–01–2010.**

ಸರ್ಕಾರದ ಆದೇಶ ಸಂ: ಆರ್‌ಡಿ 46 ಎಡಿಇ 2007, ದಿನಾಂಕ: 12–05–2009ರಲ್ಲಿನ ಆದೇಶದ ಭಾಗದ ನಾಲ್ಕನೇ ಸಾಲಿನ "ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯಿತಿ, ಮೈಸೂರು" ಎಂಬುದರ ಬದಲಾಗಿ "ಮಹಾಲೇಖಪಾಲರು, ಬೆಂಗಳೂರು" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಎಸ್.ಬಿ. ಸಸಾಲಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 276

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಆರ್. ರಮೇಶ್, ಪಿ.ಎಸ್.ಐ. ಬಸವನಹಳ್ಳಿ ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು, ಇವರ ಆದೇಶ ಸಂಖ್ಯೆ: ಪಿಆರ್ 11/2008 ದಿನಾಂಕ 01–03/04–2009.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ/3/09/ಪವ/2009 ದಿನಾಂಕ: 08–06–09.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 25–07–09.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)32/2009–10 ದಿನಾಂಕ: 22–10–2009.

**ಪ್ರಸ್ತಾವನೆ :**

ಶ್ರೀ ಆರ್. ರಮೇಶ್, ಪಿ.ಎಸ್.ಐ. ಬಸವನಹಳ್ಳಿ ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

ದೋಷಾರೋಪಣೆ:

> "ಶ್ರೀ ಆರ್. ರಮೇಶ್, ಪಿ.ಎಸ್.ಐ., ಆದ ನೀವು ಶ್ರೀ ರಾಮಾನಾಯ್ಕ ಇವರು ದಿನಾಂಕ: 12-2-2008 ರಂದು ಠಾಣೆಗೆ ಹಾಜರಾಗಿ ನೀಡಿದ ದೂರಿನ ಮೇರೆಗೆ ಮೊ.ನಂ.:30/08 ಕಲಂ 498(ಎ). 306 ಐಪಿಸಿ ಪ್ರಕರಣ ದಾಖಲಿಸಿದ್ದು ಸದರಿ ಪ್ರಕರಣದ ತನಿಖೆಯನ್ನು ಸಮರ್ಪಕವಾಗಿ ನಡೆಸದೆ ನಿಮ್ಮ ಆದ್ಯ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ. ಅಲ್ಲದೆ, ಸಿ.ಪಿ.ಐ., ನಗರ ವೃತ್ತ ಇವರು ನೀಡಿದ ಅಡ್ವೈಸರಿ ಮೆಮೋಗಳಲ್ಲಿನ ಸೂಚನೆಗಳನ್ನು ಸರಿಯಾಗಿ ಪಾಲಿಸದೆ ನಿರ್ಲಕ್ಷ್ಯತನ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 01-03/04-2009ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು. ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 08-06-2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಕಂಡು ಬರುತ್ತಿಲ್ಲ, ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು. ಅತೀವ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ, ಒಇ 145 ಪೊಸಿಅ 2009, ಬೆಂಗಳೂರು, ದಿನಾಂಕ 11ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್. ರಮೇಶ್, ಪಿ.ಎಸ್.ಐ. ಬಸವನಹಳ್ಳಿ ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 277

**(ಟಿ.ಎನ್. ರವಿಪ್ರಕಾಶ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಅಬ್ದುಲ್ ಖಲೀಲ್, ಮಾಜಿ ಪಿ.ಸಿ. ಹಳ್ಳಿಖೇಡ ಪೊಲೀಸ್ ಠಾಣೆ, ಬೀದರ್ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೀದರ್, ಇವರ ಆದೇಶ ಸಂಖ್ಯೆ: 9/ಡಿಇ/2004 ಓ.ಬಿ ಸಂ.: 444/2005 ದಿನಾಂಕ 23-03-2005.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಅಪೀಲು/57/ಈವ/2005/3919 ಅ.ಪು. ಸಂಖ್ಯೆ: 372/ಈವ/2005 ದಿನಾಂಕ: 14-09-05.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 08-02-08.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)137/2007-08 ದಿನಾಂಕ: 04-08-2008.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 222 ಸಿಎನ್‌ಎಸ್ 08 ದಿನಾಂಕ: 01-12-09.

**ಪ್ರಸ್ತಾವನೆ :**

ಶ್ರೀ ಅಬ್ದುಲ್ ಖಲೀಲ್, ಬೀದರ್, ಇವರು ಬೀದರ ಗಾಂಧಿಗಂಜ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

> "ನೀವು ದಿನಾಂಕ: 03–12–2002ರ ರಾತ್ರಿ ಗಸ್ತು ಕರ್ತವ್ಯಕ್ಕೆ ನೇಮಿಸಿದಾಗ ಸದರಿ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿದ್ದು ದಿನಾಂಕ: 03–12–2002 ರಿಂದ ದಿನಾಂಕ: 28–10–2003ರ ವರೆಗೆ (ಅಮಾನತ್ತಿನಲ್ಲಿರುವವರೆಗೆ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಖಂಡನೀಯ ದುರ್ನಡತೆ ಎಸಗಿರುವಿರಿ ಅಂತಾ ನಿಮ್ಮ ವಿರುದ್ಧ ಆರೋಪಗಳಿವೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೀದರ್, ಇವರು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ: 23–3–2005ರ ಆದೇಶದಲ್ಲಿ "ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿದ್ದಾರೆ. ದಿನಾಂಕ: 03–12–2002 ರಿಂದ 28–10–2003 ರವರೆಗೆ ಗೈರುಹಾಜರಾದ ಅವಧಿಯನ್ನು ಸಂಬಳರಹಿತ ರಜೆಯೆಂದು ಹಾಗೂ ದಿನಾಂಕ: 29–10–2003 ರಿಂದ 06–08–2004ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ."

ಆ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ. ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 14–09–2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯ ವಿಳಂಬವನ್ನು ಮನ್ನಾ ಮಾಡಿ ಅರ್ಜಿದಾರರು ಸರ್ಕಾರದಲ್ಲಿ ಸಲ್ಲಿಸಿದ ಸೇವಾವಧಿಯನ್ನು ಗಮನದಲ್ಲಿರಿಸಿ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಲು ಸರ್ಕಾರವು ತೀರ್ಮಾನಿಸಿ ಉಲ್ಲೇಖ (5)ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ, ಒಇ 146 ಪೊಸಿಅ 2008, ಬೆಂಗಳೂರು, ದಿನಾಂಕ 11ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಅಬ್ದುಲ್ ಖಲೀಲ್, ಮಾಜಿ ಪಿ.ಸಿ. ಇವರಿಗೆ ಶಿಸ್ತು ಪ್ರಾಧಿಕಾರದ ದಿನಾಂಕ: 23–03–2005ರ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ, ಅರ್ಜಿದಾರರನ್ನು 'ಕಡ್ಡಾಯ ನಿವೃತ್ತಿಗೊಳಿಸಿ' ಆದೇಶಿಸಿದೆ. ಗೈರುಹಾಜರಾದ ದಿನಾಂಕ 03–12–2002 ರಿಂದ 28–10–03ರ ವರೆಗಿನ ಅವಧಿಯನ್ನು ಸಂಬಳ ರಹಿತ ರಜೆಯೆಂದು ಹಾಗೂ ದಿನಾಂಕ 29–10–03 ರಿಂದ 07–08–2004ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 278

**(ಟಿ.ಎನ್. ರವಿಪ್ರಕಾಶ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಆಕುಕ 09 ಎಂಎಂಸಿ 2010 ಬೆಂಗಳೂರು, ದಿನಾಂಕ: 25–01–2010.**

ಸರ್ಕಾರದ ಆದೇಶ ಸಂ: ಆಕುಕ 395 ಎಂಎಂಸಿ 2007 ದಿನಾಂಕ: 06–01–2010ರ ಅನುಬಂಧ–II ರಲ್ಲಿ ವೈದ್ಯರ ಹೆಸರನ್ನು "ಡಾ: ಕೆ. ಕಸ್ತೂರಿ" ಎಂಬುದಕ್ಕೆ ಬದಲಾಗಿ "ಡಾ: ಪಿ. ಕಸ್ತೂರಿ" ಹಾಗೂ ಸೇವೆಗೆ ಸೇರಿದ ದಿನಾಂಕವನ್ನು "31–07–2006"ಕ್ಕೆ ಬದಲಾಗಿ "31–07–1986" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 279

**(ವಿ. ಶ್ರೀರಾಮರೆಡ್ಡಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

## HEALTH AND FAMILY WELFARE SECRETARIAT

Sub: C.C.C.No. 696/2009 – Dr. S.J. Rajalakshmi, compliance – reg.

Read:
(1) Hon'ble High Court Order dated 03-08-2009 in W.P. No. 18261/2009 (EDN-RES).
(2) Order No. PDA/Sec 62/01/2009-10/296 dated 12-06-2009.
(3) Government Letter No. HFW 104 MPS 2009 dated 27-06-2009.
(4) Government Letter No. HFW 104 MPS 2009 dated 31-08-2009.
(5) Letter NO. PGS/07/2009-10 dated 12-01-2010.

**Preamble:**

Reservation to physically handicapped candidates in Post Graduate Medical/Dental seats is examined in detail. All these years, the Reservation to physically handicapped was given in seats in Government Colleges and Government Aided Colleges as per section 39 of the persons with Disabilities (Equal Opportunities, Protection of Rights and Full Participation) Act, 1995. The Government of Karnataka have examined the matter thoroughly with connected records and issued this orders.

**Government Order No. HFW 104 MPS 2009, Bangalore Dated 27-01-2010.**

The Reservation in Post Graduate seats is extended to Government quota in Private Unaided Dental Colleges surrendered to Government for allotment through PGET in pursuance to High Court Order dated 03-08-2009 in W.P.No. 18261/2009 with immediate effect.

The High Court Order dated 03-08-2009 in W.P.No. 18261/2009 reads as follows………. "The respondent shall consider the case of the petitioner and decide if she is entitled for allotment of a seat under the 'Physically Handicapped' category by applying 3% reservation on the basis of her merit. If it is found that the petitioner is entitled for a seat and would have been allotted a seat under 'Physically Handicapped' category had the reservation to this category been made applicable to the current year, then a seat shall be allotted to her in the next academic year."

Dr. S.J. Rajalakshmi's case is viewed in this background. The total PG Dental seats in Government Colleges will be 11 and the Government quota seats in Private Unaided Dental Colleges will be 158 for the year 2009-10. Since the total Government seats and Government quota seats is 169, the PH quota at 3% is 5.07. If that criteria is considered, the ranking of Dr. S.J. Rajalakshmi in PGET stands 5$^{th}$. She would be eligible for admission to PG Dental seat. Hence 6 seats given out of 169 seats to PH quota for the year 2009-10. Dr. S.J. Rajalakshmi, BDS shall be given MDS seat during 2010-11 in compliance to High Court Order dated 03-08-2009 in W.P.No. 18261/2009.

By Order and in the name of the Governor of Karnataka

**(V. UMESH)**

P.R. 280

Principal Secretary to Government

Department of Health and Family Welfare

(Medical Education)

## HEALTH AND FAMILY WELFARE SECRETARIAT

**Sub :-** Creation of PHCF/VHSC Consultant for Monitoring Activities-reg.

**Read :-** Proceedings of the 18th Meeting of the Programme Steering Committee dt. 3-11-2009.

**Preamble:**

The Karnataka Health System Development and Reform Project intends to undertake capacity building of Village Health Sanitation Committees (VHSC) and other committees like Arogya Raksha Samithies in the State. It is proposed to undertake capacity building & handholding exercise of 28,000 such committees for two years. This is to be carried out by selected District Non-Governmental Organisations in the State. Under Public Health Competitive Fund (PHCF) component of the project, non-curative services are also being taken up in the State by contracting-out projects to organizations. All such projects also need to be monitored thoroughly. In this context, it is necessary to have a consultant who can assist the project in monitoring PHCF/VHSC activities in the State.

In the Proceedings read above, the proposal to create 4 posts of PHCF/VHSC Consultants and other supporting staff for monitoring the above said activities was approved by the Project's Programme Steering Committee in its 18th meeting held on 3rd November 2009.

Detailed staffing pattern and budget is as below :-

| Sl. No. | Designation of the Post | Qualification | No. of Posts | Financial implication per month (in Rs.) | Financial implication per annum (in Rs.) |
|---|---|---|---|---|---|
| 1. | PHCF/VHSC Consultant for Monitoring | Master of Social Works | 4 | 20,000 | 9,60,000-00 |
| 2. | Supporting Staff Computer Programmer | Any degree with Computer Knowledge | 4 | 8230-00 | 3,95,040-00 |
| 3. | Group 'D' | Hire through Agency | 4 | 6806-00 | 3,26,688-00 |
| | | **TOTAL** | | | **16,81,728-00** |

(Rupees Sixteen Lakhs Eighty one thousand seven hundred and twenty eight only)

Hence the following order.

**Government Order No. HFW (PR) 4 WBA 2010 Bangalore, dated : 23-01-2010**

Under the circumstances mentioned in the preamble, Government are pleased to approve and create the following temporary posts in the Project for Monitoring Activites of PHCF/VHSC. The details of posts are as follows :

| Sl. No. | Designation of the Post | No. of Posts | Honararium per month (in Rs.) | Source of Recruitment |
|---|---|---|---|---|
| 1. | PHCF/VHSC Consultant for Monitoring (one each for 4 divisions) | 4 | 20,000-00 | From Market |
| 2. | Supporting Staff Computer Programmer (one each for 4 divisions) | 4 | 8230-00 | Through outsourcing |
| 3. | Group 'D' (one each for 4 divisions) | 4 | 6806-00 | Through outsourcing |

These temporary posts have been created for a period of 1 year. Procurement of personnel shall be by following the relevant procedures and guidelines.

Approval is also given for the estimated budget of Rs. 16,81,728-00 lakhs per annum as detailed in the preamble.

The expenditure shall be incurred under the Head of Account "2210-06-800-0-84 (Plan)" Project Management and Evaluation" under PHCF Component for the corresponding financial year.

The Consultants shall enter into an agreement with the Project. The Consultants will carry out the assignments as per the responsibilities prescribed. The work of the consultant will be regularly monitored and supervised by the officers of the Project and Senior Officers of the Department, as per instructions issued by the Government from time to time.

By Order and in the name of the Governor of Karnataka
**(M.Shashidhar)**
Deputy Secretary to Government
KHSDRP
Health and Family Welfare Department

PR NO. 281

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಭಗವಾನ್ ಬಿ. ಸೇವಾನಿರತ ಸ್ನಾತಕೋತ್ತರ ವ್ಯಾಸಂಗದ ವಿದ್ಯಾರ್ಥಿ ಇವರು ವ್ಯಾಸಂಗವನ್ನು ಬಿಡಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 86 ಹೆಚ್‌ಎಸ್‌ಹೆಚ್ 09 (ಭಾಗ–2) ದಿನಾಂಕ : 30–06–2009.
2. ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ : ಜೆಆರ್‌ಒ(ಎಂ) 45/2009–10 ದಿನಾಂಕ : 16–11–2009.

**ಪ್ರಸ್ತಾವನೆ :**

ಡಾ॥ ಭಗವಾನ್ ಬಿ. ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಕಮಲನಗರ, ಔರಾದ್ ತಾಲ್ಲೂಕು, ಬೀದರ್ ಜಿಲ್ಲೆ, ಇವರನ್ನು ಸೇವಾನಿರತ ವೈದ್ಯರ ಕೋಟಾದಲ್ಲಿ ಮೊದಲಬಾರಿಗೆ ಎಂಎಸ್(ಜನರಲ್ ಸರ್ಜರಿ) ವಿಷಯದಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆ ಫಾದರ್ ಮುಲ್ಲರ್ ಮೆಡಿಕಲ್ ಕಾಲೇಜು, ಮಂಗಳೂರು ಇಲ್ಲಿಗೆ ಮೇಲೆ ಓದಲಾದ ಕ್ರಮಾಂಕ (1) ಅಧಿಸೂಚನೆಯಲ್ಲಿ ಕೆಲವೊಂದು ಷರತ್ತುಗಳೊಂದಿಗೆ ನಿಯೋಜಿಸಲಾಗಿತ್ತು. ಇದರನ್ವಯ ಸದರಿ ವೈದ್ಯರು ದಿನಾಂಕ : 13–07–2009 ರಂದು ವ್ಯಾಸಂಗಕ್ಕೆ ಹಾಜರಾಗಿರುತ್ತಾರೆ. ಆದರೆ, ವ್ಯಾಸಂಗದ ಅವಧಿಯಲ್ಲಿ ಉಂಟಾದ ಅನಾರೋಗ್ಯ ಮತ್ತು ಮಂಗಳೂರಿನ ವಾತಾವರಣ ಹೊಂದಿಕೆ ಆಗದ ಕಾರಣದಿಂದ ವ್ಯಾಸಂಗವನ್ನು ಮುಂದುವರೆಸಲು ಸಾಧ್ಯವಾಗದೇ ಇದ್ದುದರಿಂದ ಈ ವ್ಯಾಸಂಗವನ್ನು ಮೊಟಕುಗೊಳಿಸಿದ್ದಾರೆ. ಇದರಿಂದ ಕರಾರು ಪತ್ರ ಹಾಗೂ ನಿಯಮಾನುಸಾರ ಸರ್ಕಾರಕ್ಕೆ ಮತ್ತು ಖಾಸಗಿ ಕಾಲೇಜಿಗೆ ಸಂದಾಯ ಮಾಡಬೇಕಾಗಿರುವ ದಂಡದ ಮೊತ್ತ ಮತ್ತು ಇತರ ಶುಲ್ಕವನ್ನು ಸಂದಾಯ ಮಾಡಿರುವುದರಿಂದ ಹಾಗೂ ಸರ್ಕಾರಕ್ಕೆ ಸಂದಾಯ ಮಾಡಬೇಕಾಗಿರುವ ಮೊತ್ತವನ್ನು ಪಾವತಿ ಮಾಡಲು ಒಪ್ಪಿರುವುದರಿಂದ ಇವರು ಉನ್ನತ ವ್ಯಾಸಂಗವನ್ನು ಮೊಟಕುಗೊಳಿಸಲು ಅನುಮತಿ ನೀಡುವಂತೆ ಮೇಲೆ ಓದಲಾದ ಕ್ರಮಾಂಕ (2) ರಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಕೋರಿದ್ದಾರೆ.

ಸದರಿ ವೈದ್ಯರು ಸೇವಾನಿರತ ಕೋಟಾದಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿದಾಗ ಬರೆದುಕೊಟ್ಟ ಕರಾರು ಪತ್ರಗಳು ಮತ್ತು Karnataka Conduct of Entrance Test for selection and admission to Post Graduate Medical and Dental degree and Diploma Courses Rules 2006 ರಲ್ಲಿರುವ ಷರತ್ತುಗಳಿಗೆ ಅನುಗುಣವಾಗಿ ಈ ಪ್ರಕರಣವನ್ನು ಪರಿಶೀಲಿಸಿ, ಇವರು ಸ್ನಾತಕೋತ್ತರ ವ್ಯಾಸಂಗವನ್ನು ಮೊಟಕುಗೊಳಿಸಲು ಅನುಮತಿ ನೀಡಲು ಸರ್ಕಾರವು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 627 ಹೆಚ್‌ಎಸ್‌ಹೆಚ್ 2009, ಬೆಂಗಳೂರು, ದಿನಾಂಕ: 21ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಡಾ॥ ಭಗವಾನ್ ಬಿ. ವೈದ್ಯಾಧಿಕಾರಿ, ಇವರು ಸೇವಾನಿರತ ಕೋಟಾದಲ್ಲಿ ಸ್ನಾತಕೋತ್ತರ ವ್ಯಾಸಂಗವನ್ನು ಮೊಟಕುಗೊಳಿಸಲು ಕೆಳಕಂಡ ಷರತ್ತುಗಳಿಗೆ ಅನುಗುಣವಾಗಿ ಸರ್ಕಾರವು ಅನುಮತಿ ನೀಡಿದೆ ಮತ್ತು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸಮುದಾಯ ಆರೋಗ್ಯ ಕೇಂದ್ರ, ಕಮಲನಗರ, ಔರಾದ್ ತಾಲ್ಲೂಕು, ಬೀದರ್ ಜಿಲ್ಲೆ ಇಲ್ಲಿ ಖಾಲಿ ಇರುವ ವೈದ್ಯಾಧಿಕಾರಿ ಹುದ್ದೆಗೆ ನೇಮಕ ಮಾಡಿದೆ.

ಸದರಿ ವೈದ್ಯರು ನೇಮಕ ಮಾಡಿದ ಹುದ್ದೆಯಲ್ಲಿ ಹಾಜರಾಗಿ ಸಂಬಂಧಪಟ್ಟ ಎಲ್ಲರಿಗೂ ಸಿ.ಟಿ.ಸಿ. ಯನ್ನು ಸಲ್ಲಿಸುವುದು.

1. ಸ್ನಾತಕೋತ್ತರ ವ್ಯಾಸಂಗಕ್ಕೆ ತೆರಳುವ ಸಮಯದಲ್ಲಿ ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇವರಿಗೆ ಸಂದಾಯ ಮಾಡಿರುವ ರೂ. 50,000/–ಗಳನ್ನು ದಂಡವನ್ನಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಹಾಗೂ ಖಾಸಗಿ ಕಾಲೇಜಿಗೆ ಸ್ನಾತಕೋತ್ತರ ವ್ಯಾಸಂಗಕ್ಕೆ ಸಂದಾಯ ಮಾಡಿದ ಫೀ ಗೆ ಸಮಾನಂತರವಾದ ಮೊತ್ತವನ್ನು ಪ್ರತಿ ತಿಂಗಳು ಅವರ ಸಂಬಳದಲ್ಲಿ ಕಟಾಯಿಸುವ ಬಗ್ಗೆ ಕ್ರಮ ತೆಗೆದುಕೊಳ್ಳಲು ಆಯುಕ್ತರಿಗೆ ನಿರ್ದೇಶಿಸಿದೆ.

2. ಸದರಿ ವೈದ್ಯರನ್ನು ಮುಂದಿನ ಮೂರು ಶೈಕ್ಷಣಿಕ ವರ್ಷಗಳ ಕಾಲಾವಧಿಯಲ್ಲಿ ಸೇವಾನಿರತ ಕೋಟಾದಲ್ಲಿ ಸ್ನಾತಕೋತ್ತರ/ಡಿಪ್ಲೊಮ ಪ್ರವೇಶ ಪರೀಕ್ಷೆ ತೆಗೆದುಕೊಳ್ಳುವುದನ್ನು ನಿಷೇಧಿಸಲಾಗಿದೆ.

3. ಸ್ನಾತಕೋತ್ತರ ವ್ಯಾಸಂಗಕ್ಕೆ ಹಾಜರಾದ ದಿನಾಂಕದಿಂದ ಪುನಃ ನೇಮಕಾತಿ ಮಾಡಿದ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗುವ ದಿನಾಂಕದವರೆಗೆ ಅವರ ಹಕ್ಕಿನಲ್ಲಿರುವ ರಜೆ ಅಥವಾ ರಜೆ ಇಲ್ಲದಿದ್ದಲ್ಲಿ ಅಸಾಧಾರಣ ರಜೆ ಮಂಜೂರು ಮಾಡಿ ಅವಧಿಯನ್ನು ಸಕ್ರಮಗೊಳಿಸುವ ಬಗ್ಗೆ ಕ್ರಮ ತೆಗೆದುಕೊಳ್ಳುವಂತೆ ಆಯುಕ್ತರಿಗೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.282

**(ಐ. ಹೇಮನಾಥ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ವಿದ್ಯಾನಿಕೇತನ ಶಿಕ್ಷಣ ಇನ್ಸ್‌ಟಿಟ್ಯೂಟ್ ಆಫ್ ಪ್ಯಾರಾ ಮೆಡಿಕಲ್ ಸೈನ್ಸಸ್, ಸಿಂದಗಿ – ಪ್ಯಾರಾ ಮೆಡಿಕಲ್ ಕೋರ್ಸ್‌ಗಳ ಮಂಜೂರಾತಿ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ : ಪಿಎಂಬಿ/08/09–10 ದಿನಾಂಕ : 27–11–2009.

**ಪ್ರಸ್ತಾವನೆ :**

ಕರ್ನಾಟಕ ಪ್ಯಾರಾ ಮೆಡಿಕಲ್ ಬೋರ್ಡ್‌ನ ಸದಸ್ಯ ಕಾರ್ಯದರ್ಶಿಯವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ವಿದ್ಯಾನಿಕೇತನ ಶಿಕ್ಷಣ ಇನ್ಸ್‌ಟಿಟ್ಯೂಟ್ ಆಫ್ ಪ್ಯಾರಾ ಮೆಡಿಕಲ್ ಸೈನ್ಸಸ್, ಸಿಂದಗಿ ಇವರಿಗೆ ಡಿಪ್ಲೊಮ ಇನ್ ಮೆಡಿಕಲ್ ಲ್ಯಾಬ್ ಟೆಕ್ನಾಲಜಿ ಮತ್ತು ಡಿಪ್ಲೊಮ ಇನ್ ಹೆಲ್ತ್ ಇನ್ಸ್‌ಪೆಕ್ಟರ್ ಕೋರ್ಸುಗಳ ಮಂಜೂರಾತಿಗಾಗಿ ಅರ್ಜಿಯನ್ನು ಪ್ಯಾರಾ ಮೆಡಿಕಲ್ ಮಂಡಳಿಗೆ ಸಲ್ಲಿಸಿದ್ದಾರೆಂದು, ಮಂಡಳಿಯು ವಿಷಯ ತಜ್ಞರ ತಂಡವನ್ನು ರಚಿಸಿ ಕೋರ್ಸುಗಳನ್ನು ಸಂಸ್ಥೆಯು ನಡೆಸಲು ಹೊಂದಿರುವ ಮೂಲಭೂತ ಸೌಕರ್ಯಗಳನ್ನು ಪರಿವೀಕ್ಷಿಸಿ ಅದರ ವರದಿಯನ್ನು ಸಲ್ಲಿಸಲು ಸೂಚಿಸಿತ್ತೆಂದು, ತಜ್ಞರ ತಂಡವು ಸಂಸ್ಥೆಗೆ ದಿನಾಂಕ 29–07–2009ರಂದು ಭೇಟಿ ನೀಡಿ ಪರಿವೀಕ್ಷಿಸಿ, ವರದಿಯನ್ನು ಸೂಕ್ತ ಶಿಫಾರಸ್ಸಿನೊಂದಿಗೆ ಮಂಡಳಿಗೆ ಸಲ್ಲಿಸಿತ್ತೆಂದು, ತಜ್ಞರ ತಂಡದ ಪರಿವೀಕ್ಷಣ ವರದಿಯನ್ನು ದಿನಾಂಕ 28–10–2009ರಂದು ನಡೆದ ಮಂಡಳಿಯ ಸಭೆಯಲ್ಲಿ ವಿಶ್ಲೇಷಿಸಿ ಕೋರ್ಸ್‌ಗಳನ್ನು ಮಂಜೂರು ಮಾಡಲು ಶಿಫಾರಸ್ಸು ಮಾಡಿದೆಯೆಂದು ವರದಿ ಮಾಡುತ್ತಾ ಮಂಜೂರಾತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ವಿದ್ಯಾನಿಕೇತನ ಶಿಕ್ಷಣ ಇನ್ಸ್‌ಟಿಟ್ಯೂಟ್ ಆಫ್ ಪ್ಯಾರಾ ಮೆಡಿಕಲ್ ಸೈನ್ಸಸ್, ಸಿಂದಗಿ ಇವರಿಗೆ ಡಿಪ್ಲೊಮ ಇನ್ ಮೆಡಿಕಲ್ ಲ್ಯಾಬ್ ಟೆಕ್ನಾಲಜಿ ಮತ್ತು ಡಿಪ್ಲೊಮ ಇನ್ ಹೆಲ್ತ್ ಇನ್ಸ್‌ಪೆಕ್ಟರ್ ಕೋರ್ಸ್‌ಗಳನ್ನು ತಲಾ 20 ಸೀಟುಗಳ ವಾರ್ಷಿಕ ಪ್ರವೇಶಮಿತಿಯೊಂದಿಗೆ 2010–11ನೇ ಸಾಲಿನಿಂದ ಪ್ರಾರಂಭಿಸಲು ಮಂಜೂರಾತಿ ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 86 ಎಂಎಂಇ 2009, ಬೆಂಗಳೂರು, ದಿನಾಂಕ: 21ನೇ ಜನವರಿ 2010**

ವಿದ್ಯಾನಿಕೇತನ ಶಿಕ್ಷಣ ಇನ್ಸ್‌ಟಿಟ್ಯೂಟ್ ಆಫ್ ಪ್ಯಾರಾ ಮೆಡಿಕಲ್ ಸೈನ್ಸಸ್, ಸಿಂದಗಿ ಇವರಿಗೆ ತಲಾ 20 (ಇಪ್ಪತ್ತು) ಸೀಟುಗಳ ವಾರ್ಷಿಕ ಪ್ರವೇಶ ಮಿತಿಯೊಂದಿಗೆ ಡಿಪ್ಲೊಮ ಇನ್ ಮೆಡಿಕಲ್ ಲ್ಯಾಬ್ ಟೆಕ್ನಾಲಜಿ ಮತ್ತು ಡಿಪ್ಲೊಮ ಇನ್ ಹೆಲ್ತ್ ಇನ್ಸ್‌ಪೆಕ್ಟರ್ ಕೋರ್ಸ್‌ಗಳನ್ನು 2010–11ನೇ ಸಾಲಿನಿಂದ ಹೊಸದಾಗಿ ಪ್ರಾರಂಭಿಸಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಮಂಜೂರಾತಿ ನೀಡಿದೆ.

**<u>ಷರತ್ತುಗಳು :</u>**

1. ಯಾವುದೇ ಪ್ಯಾರಾ ಮೆಡಿಕಲ್ ಕೋರ್ಸುಗಳನ್ನು ಪ್ರಾರಂಭ ಮಾಡುವ ಮೊದಲು ಸಂಸ್ಥೆಯು ಸಂಯೋಜನಾ ಶುಲ್ಕದ ರೂಪದಲ್ಲಿ ಪ್ರತಿ ಕೋರ್ಸಿಗೆ ರೂ. 30,000/– (ಮೂವತ್ತು ಸಾವಿರ ರೂಪಾಯಿಗಳು ಮಾತ್ರ) ಹಾಗೂ ಪ್ರತಿ ವರ್ಷ ಸಂಯೋಜನಾ ನವೀಕರಣ ಶುಲ್ಕವಾಗಿ ರೂ. 10,000/– (ಹತ್ತು ಸಾವಿರ ರೂಪಾಯಿಗಳು ಮಾತ್ರ) ಅನ್ನು ಪ್ಯಾರಾ ಮೆಡಿಕಲ್ ಬೋರ್ಡಿಗೆ ಸಂದಾಯ ಮಾಡತಕ್ಕದ್ದು.
2. ಸಂಸ್ಥೆಯವರು ಕೋರ್ಸನ್ನು ಪ್ರಾರಂಭಿಸುವ ಮೊದಲು ಬೋರ್ಡ್ ನಿಗಧಿಪಡಿಸುವ ಬ್ಯಾಂಕ್ ಗ್ಯಾರಂಟಿಯನ್ನು ಒದಗಿಸತಕ್ಕದ್ದು.
3. ಸದರಿ ಕೋರ್ಸುಗಳಿಗೆ ವಿದ್ಯಾರ್ಥಿ ಪ್ರವೇಶವನ್ನು ವರ್ಷಕ್ಕೆ ಒಂದು ಬಾರಿ ನವೆಂಬರ್ ತಿಂಗಳೊಳಗೆ ತೆಗೆದುಕೊಂಡು ಜನವರಿ ಅಥವಾ ಫೆಬ್ರವರಿ ತಿಂಗಳ ಮದ್ಯಾಂತರದೊಳಗೆ ವಿದ್ಯಾರ್ಥಿಗಳ ಪಟ್ಟಿಯನ್ನು ಮೂಲ ಅಂಕಪಟ್ಟಿ ಮತ್ತು ದೃಢೀಕರಣಗಳನ್ನು ಬೋರ್ಡಿಗೆ ಸಲ್ಲಿಸತಕ್ಕದ್ದು.
4. ಸದರಿ ಕೋರ್ಸುಗಳಿಗೆ ಪ್ರವೇಶ ಪಡೆದ ಪ್ರತಿ ವಿದ್ಯಾರ್ಥಿಗೆ ರೂ. 500.00 ರಂತೆ ನೋಂದಣಿ ಶುಲ್ಕದೊಂದಿಗೆ ವಿದ್ಯಾರ್ಥಿಗಳ ಆಯ್ಕೆ ಪಟ್ಟಿಯನ್ನು ಅವರ ವಿದ್ಯಾರ್ಹತೆಯ ಪ್ರಮಾಣ ಪತ್ರದೊಂದಿಗೆ ಮಂಜೂರಾತಿಗಾಗಿ ಪ್ಯಾರಾ ಮೆಡಿಕಲ್ ಬೋರ್ಡಿಗೆ ಸಲ್ಲಿಸತಕ್ಕದ್ದು.
5. ಪ್ಯಾರಾ ಮೆಡಿಕಲ್ ಕೋರ್ಸಿಗೆ ಪ್ರವೇಶ ಪಡೆಯಲು ಕನಿಷ್ಠ ವಿದ್ಯಾರ್ಹತೆಯು ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು. ಕೋರ್ಸಿನ ಅವಧಿ ಮೂರು ವರ್ಷಗಳಾಗಿರತಕ್ಕದ್ದು.
6. ಪ್ಯಾರಾ ಮೆಡಿಕಲ್ ಕೋರ್ಸಿಗೆ ಪ್ರವೇಶ ಪಡೆದ ಪ್ರತಿ ವಿದ್ಯಾರ್ಥಿಯಿಂದ ಸರ್ಕಾರ ನಿಗಧಿಪಡಿಸಿದ ಶುಲ್ಕವನ್ನು ಮಾತ್ರ ಪಡೆಯತಕ್ಕದ್ದು.
7. ಸರ್ಕಾರ ಮಂಜೂರಾತಿ ನೀಡಿದ ಪ್ರವೇಶ ಮಿತಿಗಿಂತ ಹೆಚ್ಚಿನ ವಿದ್ಯಾರ್ಥಿಗಳಿಗೆ ಪ್ರವೇಶ ನೀಡತಕ್ಕದ್ದಲ್ಲ. ಒಂದು ವೇಳೆ ನಿಗಧಿಪಡಿಸಿದ ಪ್ರವೇಶ ಮಿತಿಗಿಂತ ಹೆಚ್ಚಿನ ಪ್ರವೇಶ ಮಾಡಿಕೊಂಡಲ್ಲಿ ಅದರಿಂದ ಉಂಟಾಗುವ ಅನಾನುಕೂಲ ಸಮಸ್ಯೆಗಳಿಗೆ ಸಂಸ್ಥೆಯೇ ಜವಾಬ್ದಾರಿಯಾಗಿರುತ್ತದೆ.
8. ಸಂಸ್ಥೆಯವರಿಗೆ ನಿಗಧಿಪಡಿಸಿದ ಸೀಟುಗಳಲ್ಲಿ ಶೇ. 20ರಷ್ಟನ್ನು ಸರ್ಕಾರದಿಂದ ಆಯ್ಕೆ ಮಾಡಿದ ಅಭ್ಯರ್ಥಿಗಳಿಗೆ ಪ್ರವೇಶ ನೀಡಲು ಸಂಸ್ಥೆಯು ಬದ್ಧವಾಗಿರತಕ್ಕದ್ದು.
9. ಪ್ಯಾರಾ ಮೆಡಿಕಲ್ ಬೋರ್ಡ್ ನಿಗಧಿಪಡಿಸಿದ ನಿಯಮಾವಳಿಯಂತೆ, ಪ್ಯಾರಾ ಮೆಡಿಕಲ್ ಕೋರ್ಸಿಗೆ ಪ್ರವೇಶ ಪಡೆಯುವ ಪ್ರತಿ ವಿದ್ಯಾರ್ಥಿಯು ವಯೋಮಿತಿ, ಪಠ್ಯಕ್ರಮ, ಕೋರ್ಸಿನ ಅವಧಿ ಹಾಗೂ ಪರೀಕ್ಷಾ ಕ್ರಮ ಮತ್ತು ಪ್ಯಾರಾ ಮೆಡಿಕಲ್ ಬೋರ್ಡ್ ನಿಗಧಿಪಡಿಸಿದ ಇತರೆ ನಿಯಮಗಳನ್ನು ಸಂಸ್ಥೆಯು ಚಾಚೂ ತಪ್ಪದೇ ಕಡ್ಡಾಯವಾಗಿ ಪಾಲಿಸತಕ್ಕದ್ದು.
10. ಸಂಸ್ಥೆಯು ಸುಸಜ್ಜಿತ ತರಗತಿ ಕೊಠಡಿ, ಪ್ರಯೋಗಶಾಲೆ, ವಾಚನಾಲಯ, ವಿದ್ಯಾರ್ಥಿನಿಲಯ ಹಾಗೂ ಇತರೆ ಸೌಲಭ್ಯವನ್ನು ವಿದ್ಯಾರ್ಥಿಗಳಿಗೆ ಒದಗಿಸತಕ್ಕದ್ದು.
11. ಸದರಿ ಸಂಸ್ಥೆಯು ಹೊಂದಿರುವ ಮೂಲಭೂತ ಸೌಕರ್ಯಗಳ ಬಗ್ಗೆ ವಿದ್ಯಾರ್ಥಿಗಳು ಮೊದಲ ವರ್ಷದ ಪರೀಕ್ಷೆಯನ್ನು ತೆಗೆದುಕೊಳ್ಳುವ ಪೂರ್ವದಲ್ಲಿ ಪ್ಯಾರಾ ಮೆಡಿಕಲ್ ಬೋರ್ಡ್ ಇಚ್ಛಿಸಿದಲ್ಲಿ ಎರಡನೇ ಬಾರಿಗೆ ಸಂಸ್ಥೆಯನ್ನು ತಪಾಸಣೆ ಮಾಡತಕ್ಕದ್ದು.
12. ಸರ್ಕಾರದಿಂದ ಯಾವುದೇ ಆರ್ಥಿಕ ಸೌಲಭ್ಯ ಅಥವಾ ಅನುದಾನವನ್ನು ಸಂಸ್ಥೆಗೆ ನೀಡಲಾಗುವುದಿಲ್ಲ.
13. ಸಂಸ್ಥೆಯನ್ನು ಪ್ಯಾರಾ ಮೆಡಿಕಲ್ ಬೋರ್ಡ್‌ನಲ್ಲಿ ನೋಂದಣಿ ಮಾಡಿಸತಕ್ಕದ್ದು ಹಾಗೂ ಪ್ಯಾರಾ ಮೆಡಿಕಲ್ ಬೋರ್ಡ್ ನಿಗಧಿಪಡಿಸುವ ಮಾದರಿಯನ್ನು ಅನುಸರಿಸತಕ್ಕದ್ದು.
14. ಪ್ಯಾರಾ ಮೆಡಿಕಲ್ ಕೋರ್ಸಿನ ಅಂತ್ಯದಲ್ಲಿ ಪ್ಯಾರಾ ಮೆಡಿಕಲ್ ಬೋರ್ಡ್ ನಡೆಸುವ ಪರೀಕ್ಷೆಯನ್ನು ವಿದ್ಯಾರ್ಥಿಗಳು ತೆಗೆದುಕೊಂಡು, ಉತ್ತೀರ್ಣರಾಗುವ ವಿದ್ಯಾರ್ಥಿಗಳಿಗೆ ಪ್ರಮಾಣಪತ್ರವನ್ನು ಪ್ಯಾರಾ ಮೆಡಿಕಲ್ ಬೋರ್ಡಿನಿಂದ ಪಡೆಯತಕ್ಕದ್ದು.
15. ಪ್ರತಿ ತಪಾಸಣೆಗೆ ಮತ್ತು ಒಂದು ಕೋರ್ಸಿಗೆ ಸಂಸ್ಥೆಯು ರೂ. 10,000/– (ಹತ್ತು ಸಾವಿರ ರೂಪಾಯಿಗಳು ಮಾತ್ರ) ಅನ್ನು ತಪಾಸಣಾ ಶುಲ್ಕವಾಗಿ ಪ್ಯಾರಾ ಮೆಡಿಕಲ್ ಬೋರ್ಡಿಗೆ ಪಾವತಿ ಮಾಡತಕ್ಕದ್ದು.

16. ದಿನಾಂಕ 30–03–1999 ಸಂಖ್ಯೆ : ಆಕುಕ 144 ಎಂಎಂಇ 98ರ ಸರ್ಕಾರಿ ಆದೇಶದಲ್ಲಿ ನಿರ್ದಿಷ್ಟಪಡಿಸಿರುವ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು ಹಾಗೂ ಆಕುಕ 328 ಎಂಎಸ್ಎಫ್ 07, ದಿನಾಂಕ 27–07–2007ರಲ್ಲಿ ತಿಳಿಸಿರುವ ಆದೇಶವನ್ನು ಪಾಲಿಸತಕ್ಕದ್ದು.
17. ಪ್ರಸ್ತುತ ವಿಧಿಸುತ್ತಿರುವ ಮೇಲ್ಕಂಡ ನಿಗಧಿತ ಷರತ್ತುಗಳನ್ನು ಉಲ್ಲಂಘಿಸಿದ ಸಂದರ್ಭದಲ್ಲಿ ಅಂತಹ ಪ್ಯಾರಾ ಮೆಡಿಕಲ್ ಶಾಲೆ/ಕೋರ್ಸಿನ ಮಾನ್ಯತೆಯನ್ನು ರದ್ದು ಪಡಿಸಬಹುದೆಂದು ಸಂಸ್ಥೆಯು ರೂ. 100 ಛಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ನೀಡತಕ್ಕದ್ದು.
18. ಪ್ರಸ್ತಾವಿತ ಶಾಲೆಯ ಕಟ್ಟಡವು ಬಾಡಿಗೆ/ಲೀಸ್ ಆದ ಪಕ್ಷದಲ್ಲಿ ಬಾಡಿಗೆ/ಲೀಸ್ ಕರಾರು ಪತ್ರವು ರೂ. 100 ಛಾಪಾ ಕಾಗದದಲ್ಲಿರಬೇಕು ಮತ್ತು ಬಾಡಿಗೆ/ಲೀಸ್ ಅವಧಿಯು ಕನಿಷ್ಠ 10 ವರ್ಷಗಳಿಗಿರಬೇಕು.
19. ಪ್ಯಾರಾ ಮೆಡಿಕಲ್ ಶಾಲೆ/ಕೋರ್ಸ್ ಮಂಜೂರಾತಿ ಆದ ದಿನಾಂಕದಿಂದ 5 ವರ್ಷದೊಳಗಾಗಿ ಮಂಜೂರಾತಿ ಪಡೆದ ಸಂಸ್ಥೆಯು ಪ್ಯಾರಾ ಮೆಡಿಕಲ್ ಶಾಲೆ/ಕೋರ್ಸ್‌ನ್ನು ನಡೆಸಲು ತನ್ನದೆ ಆದ ಸ್ವಂತ ಕಟ್ಟಡವನ್ನು ಹೊಂದುವುದಾಗಿ ರೂ. 100 ಛಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ನೀಡತಕ್ಕದ್ದು.
20. ಸಂಸ್ಥೆಯು ಪ್ರತಿ ವರ್ಷ ವಿದ್ಯಾರ್ಥಿಗಳ ಪ್ರವೇಶವನ್ನು ಮಾಡುವ ಮೊದಲು ಸಂಸ್ಥೆಯು ಪ್ರಾಂಶುಪಾಲರನ್ನು ಒಳಗೊಂಡಂತೆ ಎಲ್ಲಾ ಸಿಬ್ಬಂದಿಗಳ (ಬೋಧಕ ಮತ್ತು ಬೋಧಕೇತರ) ಸಂಪೂರ್ಣ ಮಾಹಿತಿಯನ್ನು ನೀಡತಕ್ಕದ್ದು.
21. ಮೇಲ್ಕಂಡ ಯಾವುದೇ ಷರತ್ತುಗಳನ್ನು ಸಂಸ್ಥೆಯು ಉಲ್ಲಂಘಿಸಿದ್ದಲ್ಲಿ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು.
22. ಪ್ಯಾರಾ ಮೆಡಿಕಲ್ ಹೊಸ ಕೋರ್ಸ್‌ಗಳನ್ನು ಪ್ರಾರಂಭಿಸಲು ಬ್ಯಾಂಕ್ ಗ್ಯಾರಂಟಿ ಅಫಿಲಿಯೇಷನ್ ಫೀ ಮತ್ತು ವಿದ್ಯಾರ್ಥಿಗಳ ಮೂಲ ದಾಖಲೆಗಳನ್ನು ಸಂಸ್ಥೆಗಳು ದಿನಾಂಕ 31–01–2011 ರೊಳಗಾಗಿ ಪ್ಯಾರಾ ಮೆಡಿಕಲ್ ಬೋರ್ಡಿಗೆ ನೀಡಿದಲ್ಲಿ 2010–11ನೇ ಸಾಲಿಗೆ ಮಂಜೂರಾತಿಯು ಅನ್ವಯಿಸತಕ್ಕದ್ದು ಅಥವಾ ದಿನಾಂಕ 01–02–2010ರ ನಂತರ ನೀಡಿದಲ್ಲಿ 2011–12ನೇ ಸಾಲಿಗೆ ಮಂಜೂರಾತಿಯು ಜಾರಿಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.283

**(ವಿ. ಶ್ರೀರಾಮರೆಡ್ಡಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಎಂ. ಜಿ. ಹಿರೇಮಠ, ಪ್ರಾಧ್ಯಾಪಕರು ಹಾಗೂ ನಿರ್ದೇಶಕರು, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ ಇವರ ಅಮಾನತ್ತು ಆದೇಶವನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರದ ಆದೇಶ ಸಂಖ್ಯೆ : ಆಕುಕ 334 ಎಂಎಂಸಿ 2007(2) ದಿನಾಂಕ: 21–02–2008.
2. ಡಾ॥ ಎಂ. ಜಿ. ಹಿರೇಮಠ್‌ರವರ ಮನವಿ ದಿನಾಂಕ : 19–11–2009.

**ಪ್ರಸ್ತಾವನೆ :**

ಡಾ॥ ಎಂ. ಜಿ. ಹಿರೇಮಠ, ಪ್ರಾಧ್ಯಾಪಕರು ಹಾಗೂ ನಿರ್ದೇಶಕರು, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ ಇವರು ಸಿಬ್ಬಂದಿ ನೇಮಕಾತಿ, ಸಿವಿಲ್ ಕಾಮಗಾರಿ, ಗುತ್ತಿಗೆ ನೀಡುವಿಕೆ ಮತ್ತು ಉಪಕರಣ ಹಾಗೂ ಔಷಧಿ ಖರೀದಿಯಲ್ಲಿ ಎಸಗಿರುವರೆನ್ನಲಾದ ಅವ್ಯವಹಾರಗಳ ಬಗ್ಗೆ ಕರ್ನಾಟಕ ಲೋಕಾಯುಕ್ತ ತನಿಖೆಯನ್ನು ಕಾಯ್ದಿರಿಸಿ ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿತ್ತು.

ಡಾ॥ ಎಂ. ಜಿ. ಹಿರೇಮಠ, ಪ್ರಾಧ್ಯಾಪಕರು ಹಾಗೂ ನಿರ್ದೇಶಕರು (ಅಮಾನತ್ತಿನಲ್ಲಿ)ರವರು ಮೇಲೆ(2)ರಲ್ಲಿ ಓದಲಾದ ತಮ್ಮ ಮನವಿಯಲ್ಲಿ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ನಡೆದ ಹಲ್ಲೆ ಪ್ರಕರಣದಲ್ಲಿ ಕರ್ನಾಟಕ ಪೋಲೀಸ್ ಸಿ.ಓ.ಡಿ. ವಿಭಾಗವು ಸಿ ರಿಪೋರ್ಟ್ ಸಲ್ಲಿಸಿದೆಯೆಂದು ಮತ್ತು ಕರ್ನಾಟಕ ಲೋಕಾಯುಕ್ತವು ತನಿಖೆಯನ್ನು ಮಾಡಿ ವರದಿ ಸಲ್ಲಿಸಿದ್ದು ಅದರಲ್ಲಿ ಯಾವುದೇ ಹಣಕಾಸಿನ ಅವ್ಯವಹಾರ ಇಲ್ಲದೇ ಇದ್ದು ಕೇವಲ ಕೆಲವೊಂದು ಸಣ್ಣಪುಟ್ಟ ನಿಯಮಗಳ ಉಲ್ಲಂಘನೆಯಾಗಿರುವುದು ಕಂಡುಬಂದಿರುವುದರಿಂದ ತನ್ನನ್ನು ಪುನಃ ಸೇವೆಗೆ ತೆಗೆದುಕೊಳ್ಳುವಂತೆ ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಡಾಃ ಶಿವಾನಂದ ದೊಡ್ಡಮನಿರವರ ಮೇಲೆ ನಡೆದ ಗುಂಡಿನ ದಾಳಿಯಲ್ಲಿ ಸಿ.ಓ.ಡಿ. ಪೋಲೀಸರು ಸಲ್ಲಿಸಿರುವ ಸಿ ವರದಿಯಂತೆ

ಡಾ॥ ಎಂ. ಜಿ. ಹಿರೇಮಠ್, ಪ್ರಾಧ್ಯಾಪಕರು ಹಾಗೂ ನಿರ್ದೇಶಕರು ರವರ ಕೈವಾಡ ಇಲ್ಲದಿರುವುದರಿಂದ ಇವರ ವಿರುದ್ಧದ ಲೋಕಾಯುಕ್ತ ವರದಿಯ ಮೇಲಿನ ಅಂತಿಮ ತೀರ್ಮಾನವನ್ನು ಕಾಯ್ದಿರಿಸಿ ಇವರನ್ನು ಅಮಾನತ್ತಿನಲ್ಲಿಟ್ಟಿರುವ ಆದೇಶವನ್ನು ರದ್ದುಗೊಳಿಸಿ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ನಿರ್ದೇಶಕರನ್ನಾಗಿ ನೇಮಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 271 ಎಂಎಂಸಿ 2009, ಬೆಂಗಳೂರು, ದಿನಾಂಕ: 19ನೇ ಜನವರಿ 2010**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ, ನಿಯಮ 10(5)(ಸಿ) ಪ್ರಕಾರ ಡಾಃ ಎಂ.ಜಿ. ಹಿರೇಮಠ್, ಪ್ರಾಧ್ಯಾಪಕರು, ಒ.ಬಿ.ಜಿ. ವಿಭಾಗ ಹಾಗೂ ನಿರ್ದೇಶಕರು, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ, ಇವರನ್ನು ಅಮಾನತ್ತಿನಲ್ಲಿಟ್ಟಿದ್ದ ಸರ್ಕಾರಿ ಆದೇಶ ಸಂಖ್ಯೆ : ಆಕುಕ 334 ಎಂಎಂಸಿ 2007(2) ದಿನಾಂಕ : 21–02–2008ನ್ನು ಅವರ ವಿರುದ್ಧದ ಲೋಕಾಯುಕ್ತ ತನಿಖೆಯ ಮೇಲಿನ ಅಂತಿಮ ತೀರ್ಮಾನವನ್ನು ಕಾಯ್ದಿರಿಸಿ ಈ ಕೂಡಲೇ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಸರ್ಕಾರಿ ಅಧಿಸೂಚನೆ ಸಂಖ್ಯೆ : ಆಕುಕ 39 ಕೆವಿಎಂ 2009 ದಿನಾಂಕ : 17–07–2009ರಲ್ಲಿ ಡಾಃ ಬಿ.ಎಸ್. ಮದಕಟ್ಟಿ, ಪ್ರಾಧ್ಯಾಪಕರು, ಜನರಲ್ ಸರ್ಜರಿ ವಿಭಾಗ, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆರವರನ್ನು ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ನಿರ್ದೇಶಕರನ್ನಾಗಿ ನೇಮಿಸಿರುವ ಆದೇಶವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಸೇವೆಗೆ ಪುನರ್‌ಸ್ಥಾಪಿಸಲ್ಪಟ್ಟಿರುವ ಡಾಃ ಎಂ.ಜಿ. ಹಿರೇಮಠ್, ಪ್ರಾಧ್ಯಾಪಕರು, ಒ.ಬಿ.ಜಿ. ವಿಭಾಗ, ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ದಿನಾಂಕ : 30–09–2010ರವರೆಗೆ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ ಇಲ್ಲಿನ ಡಾಃ ಬಿ.ಎಸ್. ಮದಕಟ್ಟಿರವರ ನೇಮಕಾತಿಯನ್ನು ರದ್ದುಗೊಳಿಸಿದ್ದರಿಂದ ಖಾಲಿಯಾಗಿರುವ ನಿರ್ದೇಶಕರ ಹುದ್ದೆಗೆ ಸ್ಥಳ ನಿಯುಕ್ತಿ ನೀಡಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.284

**(ವಿ. ಶ್ರೀರಾಮರೆಡ್ಡಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರದ ಕಾರ್ಯ ಚಟುವಟಿಕೆಗಳನ್ನು ಪ್ರಾರಂಭಿಸಲು ಅನುವಾಗುವಂತೆ ರೂ. 1.00 ಕೋಟಿ ರೂಗಳ ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :**
1. ಆದೇಶ ಸಂಖ್ಯೆ : ನಅಇ 355 ಬೆಮಪ್ರಾ 2008 (ಪಿ), ದಿನಾಂಕ : 22–10–2009.
2. ಸರ್ಕಾರಿ ಆದೇಶ ಸಂಖ್ಯೆ : ನಅಇ 06 ಪಿಎನ್‌ಜಿ 2009, ದಿನಾಂಕ : 20–4–2009
3. ಆಯುಕ್ತರು, ವಿಜಯನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ತೋರಣಗಲ್ಲು, ಸಂಡೂರು ರವರ ಪತ್ರ ಸಂಖ್ಯೆ : ವಾಡಾ : ಸಿಬ್ಬಂದಿ : ಅನುದಾನ : 32 : 2009–10, ದಿನಾಂಕ : 13–01–2010.

**ಪ್ರಸ್ತಾವನೆ :**

ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ, ನಗರಾಭಿವೃದ್ಧಿ ಇಲಾಖೆಯ ರಾಜ್ಯ ವಲಯದ ಹಾಗೂ ಕೇಂದ್ರ ಪುರಸ್ಕೃತ ಯೋಜನೆಗಳಿಗೆ ಸಂಬಂಧಿಸಿದಂತೆ 2009–10ನೇ ಸಾಲಿಗೆ ಮುಂದುವರೆದ ಯೋಜನಾ ಕಾರ್ಯಕ್ರಮಗಳಡಿಯಲ್ಲಿ ನಗರ ಭೂ ಸಾರಿಗೆ ರಾಜ್ಯ ನಿರ್ದೇಶನಾಲಯಕ್ಕಾಗಿ (DULT) ಲೆಕ್ಕ ಶೀರ್ಷಿಕೆ 2217–80–800–0–23–059 ರಡಿಯಲ್ಲಿ ಅನುವು ಮಾಡಿರುವ ಮೊತ್ತದಲ್ಲಿ ಉಳಿತಾಯ ಆಗುವ ಹಣದಲ್ಲಿ ರೂ. 1.00 ಕೋಟಿಗಳನ್ನು (ರೂ. ಒಂದು ಕೋಟಿ ಮಾತ್ರ) ಮೇಲಿನ ಲೆಕ್ಕ ಶೀರ್ಷಿಕೆಯಿಂದ ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಪ್ರಾಥಮಿಕವಾಗಿ ಅನುವು ಮಾಡಿರುವ ಹೊಸ ಲೆಕ್ಕ ಶಿರ್ಷಿಕೆ 2217–80–800–0–25ಕ್ಕೆ ಮರು ಹೊಂದಾಣಿಕೆ ಮಾಡಿ ಮೇಲೆ ಓದಲಾದ ಉಲ್ಲೇಖ (1) ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು.

ಆಯುಕ್ತರು, ವಿಜಯನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ತೋರಣಗಲ್ಲು, ಸಂಡೂರು ರವರ ಮೇಲೆ ಓದಲಾದ ಕ್ರಮಾಂಕ (3)ರ ಪತ್ರದಲ್ಲಿ ಈ ಮೊತ್ತವನ್ನು ಪಡೆಯಲು ಮಹಾಲೇಖಪಾಲರ ಕಛೇರಿಯಿಂದ ಅನುಮತಿ ದೊರೆತಿದ್ದು, ಪ್ರಾಧಿಕಾರದಿಂದ ಖಜಾನೆಯಲ್ಲಿ ವ್ಯವಹರಿಸಲು ಡ್ರಾ ಕೋಡ್ ಸಂಖ್ಯೆ : 3400TP 002 ರಲ್ಲಿ ದಿನಾಂಕ 01–01–2010 ರಲ್ಲಿ ನೀಡಿದ್ದು, ಖಜಾನೆಯಲ್ಲಿ

ಪ್ರಾಧಿಕಾರದ ಲೆಕ್ಕ ಶೀರ್ಷಿಕೆಗೆ ಅನುದಾನವು ಹೊಂದಾಣಿಕೆಯಾಗಿರುವುದಿಲ್ಲವೆಂದು ತಿಳಿಸಿ, ಪ್ರಸ್ತುತ ಪ್ರಾಧಿಕಾರದ ಸಿಬ್ಬಂದಿ/ಅಧಿಕಾರಿಗಳ ವೇತನ ಮತ್ತು ಕಾರ್ಯಚಟುವಟಿಕೆಗಳಿಗಾಗಿ ಸದರಿ ರೂ. 1.00 ಕೋಟಿ ಅನುದಾನವನ್ನು ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಪ್ರಾಧಿಕಾರದ ಸಿಬ್ಬಂದಿ/ಅಧಿಕಾರಿಗಳ ವೇತನ ಮತ್ತು ಕಾರ್ಯಚಟುವಟಿಕೆಗಳಿಗಾಗಿ ತುರ್ತಾಗಿ ಅಗತ್ಯವಿರುವ ರೂ. 100.00 ಲಕ್ಷಗಳ ಮೊತ್ತವನ್ನು 2217-80-800-0-23-059 ಲೆಕ್ಕ ಶೀರ್ಷಿಕೆಯಡಿ ನಗರ ಭೂ ಸಾರಿಗೆ ರಾಜ್ಯ ನಿರ್ದೇಶನಾಲಯಕ್ಕಾಗಿ (DULT) ಬಿಡುಗಡೆ ಮಾಡಲು ಉದ್ದೇಶಿಸಿದ ಮೊತ್ತದಲ್ಲಿ ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 355 ಬೆಮಪ್ರಾ 2008 (ಪಿ),ಬೆಂಗಳೂರು, ದಿನಾಂಕ: 25-01-2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರದ ಕಾರ್ಯ ಚಟುವಟಿಕೆಗಳಿಗಾಗಿ ತುರ್ತಾಗಿ ಅಗತ್ಯವಿರುವ ರೂ. 100.00 ಲಕ್ಷಗಳ (ರೂ. ಒಂದು ನೂರು ಲಕ್ಷಗಳು ಮಾತ್ರ) ಮೊತ್ತವನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಯಡಿ ನಗರ ಭೂ ಸಾರಿಗೆ ರಾಜ್ಯ ನಿರ್ದೇಶನಾಲಯಕ್ಕಾಗಿ (DULT) ಬಿಡುಗಡೆ ಮಾಡಲು ಉದ್ದೇಶಿಸಿದ ಮೊತ್ತದಲ್ಲಿ ಆಯುಕ್ತರು ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರ ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ.

ಲಕ್ಷ ರೂ.ಗಳಲ್ಲಿ

| ಕ್ರಮ ಸಂಖ್ಯೆ | ಯೋಜನೆಯ ಹೆಸರು | ಲೆಕ್ಕ ಶೀರ್ಷಿಕೆ | 2009-10ರ ಆಯವ್ಯಯದಲ್ಲಿ ಒದಗಿಸಿರುವ ಮೊತ್ತ | ಮೊದಲನೇ ತ್ರೈಮಾಸಿಕ ಕಂತಿನಲ್ಲಿ ಬಿಡುಗಡೆ ಮಾಡಲು ಕೋರಿರುವ ಮೊತ್ತ |
|---|---|---|---|---|
| 1 | ನಗರ ಭೂ ಸಾರಿಗೆ ರಾಜ್ಯ ನಿರ್ದೇಶನಾಲಯಕ್ಕಾಗಿ (DULT) | 2217-80-800-0-23-059 | 500.02 | 100.00 |
| | | ಒಟ್ಟು ರೂ. | 500.02 | 100.00 |

1. ಈ ಯೋಜನೆಯ ಲೆಕ್ಕ ಶೀರ್ಷಿಕೆಯಡಿ ಬಿಡುಗಡೆ ಮಾಡಲಾದ ಮೊತ್ತವನ್ನು ಬಿಡುಗಡೆ ಮಾಡಿದ ಉದ್ದೇಶಕ್ಕೆ ಮಾತ್ರ ವೆಚ್ಚ ಮಾಡತಕ್ಕದ್ದು ಹಾಗೂ ಯಾವುದೇ ಕಾರಣಕ್ಕೂ ಸದರಿ ಮೊತ್ತವನ್ನು ಬೇರೆ ಯೋಜನೆಗಳಿಗೆ ಬಳಸಬಾರದು.
2. ಈ ಆದೇಶದಲ್ಲಿ ಬಿಡುಗಡೆ ಮಾಡಿದ ಮೊತ್ತವನ್ನು ಮೇಲೆ ತಿಳಿಸಿರುವ ಲೆಕ್ಕ ಶೀರ್ಷಿಕೆಯಲ್ಲಿ ಡ್ರಾ ಮಾಡಲು ಆಯುಕ್ತರು, ವಿಜಯನಗರ ಪ್ರದೇಶ ನಗರಾಭಿವೃದ್ಧಿ ಪ್ರಾಧಿಕಾರ, ವಿಜಯನಗರ ಇವರು ಪೇಯೀಸ್ ರಸೀದಿಯಲ್ಲಿ ಸರ್ಕಾರದ ಉಪ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ಇವರ ಮೇಲು ರುಜುವನ್ನು ಪಡೆದು ಡ್ರಾ ಮಾಡತಕ್ಕದ್ದು.
3. ಈ ಆದೇಶದಲ್ಲಿ ಡ್ರಾ ಮಾಡಿದ ಮೊತ್ತವನ್ನು ವಿಜಯನಗರ ಪ್ರಾಧಿಕಾರದ ಕಾರ್ಯ ಚಟುವಟಿಕೆಗಳನ್ನು ಪ್ರಾರಂಭಿಸಲು ಅನುವಾಗುವಂತೆ ಉಪಯೋಗಿಸತಕ್ಕದ್ದು, ಮತ್ತು ಲೆಕ್ಕ ಪತ್ರಗಳನ್ನು ಪ್ರತ್ಯೇಕವಾಗಿ ನಿರ್ವಹಿಸತಕ್ಕದ್ದು.
4. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಹಣಕ್ಕೆ ಬಳಕೆ ಪ್ರಮಾಣ ಪತ್ರ (Utilization Certificate) ನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5. ಮೇಲೆ ಕ್ರಮಾಂಕ (2) ಆದೇಶದಲ್ಲಿ ವಿಧಿಸಿರುವ ಷರತ್ತುಗಳಿಗೊಳಪಟ್ಟು ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಮೊತ್ತವನ್ನು ಬಳಸಿಕೊಳ್ಳತಕ್ಕದ್ದು ಮತ್ತು ಸದರಿ ಆದೇಶದಲ್ಲಿ ಸೂಚಿಸಿರುವಂತೆ ಕ್ರಮ ವಹಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 40 Exp-9/2010, ದಿನಾಂಕ : 23-01-2010 ರನ್ವಯ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 109

**(ಸಿ.ಟಿ. ನಾರಾಯಣಸ್ವಾಮಿ)**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ: ವೃದ್ಧಿ ಪವರ್ಸ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕೆಆರ್ಇಡಿಎಲ್/06/ಮೇಲೆಬಾಹುಂಡಿ/09/1031, ದಿನಾಂಕ : 25/26-2-2009 ಮತ್ತು ಕೆಆರ್ಇಡಿಎಲ್/06/ಮೇಲೆಬಾಹುಂಡಿ/09/3081, ದಿನಾಂಕ : 14/19-9-2009.

**2.** ದಿನಾಂಕ : 23-10-2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ವೃದ್ಧಿ ಪವರ್ಸ್ ಇವರಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಮಾವಿನಕಾರ್ ಗ್ರಾಮದ ಮೇಲೆಬಾಹುಂಡಿ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ 23–10–2009 ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು ಮೆ: ವೃದ್ಧಿ ಪವರ್ಸ್ ಇವರಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 168 ಎನ್‌ಸಿಇ 2009, ಬೆಂಗಳೂರು, ದಿನಾಂಕ: 27–01–2010.**

ಮೆ: ವೃದ್ಧಿ ಪವರ್ಸ್ ಇವರಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಮಾವಿನಕಾರ್ ಗ್ರಾಮದ ಮೇಲೆಬಾಹುಂಡಿ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude : 13°53`20" Longitude : 74°45'02" Power House-Latitude: 13°52'45" Longitude : 74°45'01") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1. (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.
   (ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.
   (ಇ) ಒಡಂಬಡಿಕೆಯನ್ನು ರೂ. 400.00 ರ ಛಾಪಾ ಕಾಗದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.
   (ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.
   (ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.
4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.
5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನು ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು

ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 290

**(ಎಸ್.ಜೆ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೇ: ವೃದ್ಧಿ ಪವರ್ಸ್ ಇವರಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕೆಆರ್‌ಇಡಿಎಲ್/06/ ಹೊರಿಹೊಳೆ ಮತ್ತು ಗೋವಿಂದತೀರ್ಥ/09/1033, ದಿನಾಂಕ: 25/26–2–2009.

**2.** ದಿನಾಂಕ : 23–10–2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ವೃದ್ಧಿ ಪವರ್ಸ್ ಇವರಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಮೂಡೂರು ಗ್ರಾಮದ ಹೊರಿಹೊಳೆ ಮತ್ತು ಗೋವಿಂದ ತೀರ್ಥ ಸ್ಟ್ರೀಮ್‌ಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ : 23–10–2009 ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು ಮೆ: ವೃದ್ಧಿ ಪವರ್ಸ್ ಇವರಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 169 ಎನ್‌ಸಿಇ 2009, ಬೆಂಗಳೂರು, ದಿನಾಂಕ: 27–01–2010.**

ಮೆ: ವೃದ್ಧಿ ಪವರ್ಸ್ ಇವರಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಮೂಡೂರು ಗ್ರಾಮದ ಹೊರಿಹೊಳೆ ಮತ್ತು ಗೋವಿಂದತೀರ್ಥ ಸ್ಟ್ರೀಮ್‌ಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir-1 (Horihole) Latitude : 13°50`33" Longitude : 74°53'54" Weir-2 (Govindathirtha) Latitude

: 13°50'58" Longitude : 74°53'04" Power House-Latitude: 13°50`29" Longitude : 74°53'04") ಈ ಬಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ. :

1. (ಅ) ಸದರಿಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.
   (ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.
   (ಇ) ಒಡಂಬಡಿಕೆಯನ್ನು ರೂ. 400.00 ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.
   (ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.
   (ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.
4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.
5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನು ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.
8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 291

**(ಎಸ್.ಜಿ. ಸಂಪತ್ ಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಮೆ: ವೃದ್ಧಿ ಪವರ್ಸ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕೆಆರ್‌ಇಡಿಎಲ್/06/ಅರಸಿನಗುಂಡಿ/09/1035, ದಿನಾಂಕ : 25/26-2-2009 ಮತ್ತು ಕೆಆರ್‌ಇಡಿಎಲ್/06/ ಅರಸಿನಗುಂಡಿ /09/3082, ದಿನಾಂಕ : 14/19-9-2009.

**2.** ದಿನಾಂಕ : 23-10-2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ವೃದ್ಧಿ ಪವರ್ಸ್ ಇವರಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಅರಸಿನಗುಂಡಿ ಗ್ರಾಮದ ಸೌಪರ್ಣಿಕ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ : 23-10-2009 ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು ಮೆ: ವೃದ್ಧಿ ಪವರ್ಸ್ ಇವರಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :

**ಸರ್ಕಾರದ ಆದೇಶ ಸಂಖ್ಯೆ: ಇಎನ್ 170 ಎನ್‌ಸಿಇ 2009, ಬೆಂಗಳೂರು, ದಿನಾಂಕ: 27-01-2010.**

ಮೆ: ವೃದ್ಧಿ ಪವರ್ಸ್ ಇವರಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಅರಸಿನಗುಂಡಿ ಗ್ರಾಮದ ಸೌಪರ್ಣಿಕ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude : 13°52`50" Longitude : 74°50'35" Power House-Latitude: 13°49'45" Longitude : 74°49'50") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :

2. (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00 ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು

(ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನು ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 292

**(ಎಸ್.ಜೆ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ENERGY SECRETARIAT

**Sub :** Sanction of Pensionary Benefits to Sri K.P. Pandey, retired Chairman, KERC.

**Read:** 1. Letter No. GS 203 EST 2009 dated 21-01-2010 of the Secretary to H.E. the Governor of Karnataka.

**Preamble:**

1. Sri K.P. Pandey, assumed the Office as Chairman Karnataka Electricity Regulatory Commission on 15.12.2004 and retired on 14.12.2009 after completing five years of service in the Commission.

2. As per Rule 6 (6) of Karnataka Electricity Regulatory Commission (Chairman and other members remuneration, allowance and conditions of service) Rules, amended from time to time, H.E. the Governor of Karnataka is the competent authority for granting pension to the Chairman and other members of the Karnataka Electricity Regulatory Commission.

3. In letter read above, the Secretary, Karnataka Governor's Secretariat has informed that H.E. the Governor of Karnataka has pleased to sanction the following pensionery benefits to Sri K.P. Pandey former Chairman KERC and requested the Government to issue necessary orders in this regard.

1) Pension Rs. 2,19,450/- per annum.
2) Gratuity Rs. 1,33,333/-
3) Encashment of earned leave Rs. 2,38,187/-

4. Accordingly, this order

**Government Order No. EN 84 PSR 2009, Bangalore, Dated 29th January 2010**

In the circumstances explained in the preamble, the Government are pleased to accord approval for the sanction of pension, gratuity and leave encashment in respect of Sri K.P. Pandey (retired Chairman, KERC) as detailed below :

| | | | |
|---|---|---|---|
| 1) | Pension | : | Rs. 2,19,450/- per annum. (Rs. Two lakh nineteen thousand four hundred and fifty only) |
| 2) | Gratuity | : | Rs. 1,33,333/- (Rs. One lakh thirty three thousand three hundred and thirty three only) |
| 3) | Encashment of Earned Leave | : | Rs. 2,38,187/- (Rs. Two lakhs thirty eight thousand one hundred and eighty seven only) |

By Order and in the name of the Governor of Karnataka,

**(S.J. SAMPATHKUMAR)**

Under Secretary to Government,

Energy Department

PR. 293

## ENERGY SECRETARIAT

**Sub :** Transfer of commissioned 1.8 MW wind power capacity in favour of M/s. NUPower Renewables Limited-reg.

**Read:** 1. Government Order No. DE 46 NCE 2000 dated 17.7.2000.

2. O.M. No. KRED/08/SCUFL/2002/1098 dated 2.8.2002 from the Managing Director, Karnataka Renewable Energy Development Limited.

3. Letter No. KRED/08/SCUFL-NUPower/2009/3932 dated 26.11.2009/2.12.2009 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, sanction has been accorded for implementation of 81.60 MW capacity wind power project at Gopalpura, Mahadevanakatte, Horakere-devarapura villages, Jogimatti wind zone, Chitradurga District to M/s. Enercon (India) Limited.

In the O.M. read at (2) above, permission was given for transfer of 1.8 MW wind power capacity to M/s Shriram City Union Finance Limited from M/s Enercon (India) Limited.

The Managing Director, Karnataka Renewable Energy Development Limited, Bangalore in his letter read at (3) above has recommended for transfer of commissioned 1.8 MW wind power capacity in favour of M/s NuPower Renewables Limited from M/sShriram City Union Finance Limited at Gudikere and Budipura villages, Holalkere Taluk of Chitradurga District.

The proposal has been examined in detail and the following Orders are issued :-

**Government Order No. EN 608 NCE 2009, Bangalore, Dated 28th January 2010**

Government accords approval for transfer of commissioned 1.8 MW wind power capacity in favour of M/s NuPower Renewables Limited from M/s Shriram City Union Finance Limited at Gudikere and Budipura villages, Holalkere Taluk of Chitradurga District as detailed below and subject to the following conditions :-

| Village Name | Taluk & District | Land Survey No. | Extent of area (Ha) | Wind Turbine Generator's Numbers |
|---|---|---|---|---|
| Gudikere | Holalkere taluk in Chitradurga District | 1 | 0.691 | SCUFL-01,SCUFL-02 & SCUFL-03 |
| Budipura | Holalkere taluk in Chitradurga District | 8 | 3.405 | |

1 M/s. Nupower Renewables Limited shall execute an agreement with Government within 45 (forty five) days from the date of issue of this Order.

2 PPA is assigned to BESCOM, BESCOM shall execute the PPA/Wheeling and Banking with M/s NuPower Renewables Limited within a period of one month from the date of agreement.

3 The Government has reserved the power to Cancel/modify this Order.

The other terms and conditions of the Government Order No. DE 46 NCE 2000 dated 17.7.2000 shall **IPSO FACTO** applicable.

By Order and in the name of the Governor of Karnataka,

**(S.J. SAMPATHKUMAR)**

Under Secretary to Government,

Energy Department

PR. 294

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** "ಮೆ॥ ವಿಶ್ವನಾಥ್ ಶುಗರ್ಸ್ (ಲಿ)" ಬೆಲ್ಲದಬಾಗೇವಾಡಿ, ಹುಕ್ಕೇರಿ ತಾಲ್ಲೂಕು, ಬೆಳಗಾಂ ಜಿಲ್ಲೆ ಈ ಕಾರ್ಖಾನೆಯ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಯಿಂದ 5500 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಸಿಐ 187 ಎಸ್‌ಜಿಎಫ್ 07 ದಿನಾಂಕ 11.09.2007.
2. ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರ ಸಂಖ್ಯೆ ಡಿಎಸ್‌ಕೆ/ಡಿಇವಿ/5/1995–96 ದಿನಾಂಕ 12.11.2009.

**ಪ್ರಸ್ತಾವನೆ :**

ಮೇಲೆ ಓದಲಾದ (2) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ "ಮೆ॥ ವಿಶ್ವನಾಥ್ ಶುಗರ್ಸ್ (ಲಿ)" ಬೆಲ್ಲದಬಾಗೇವಾಡಿ, ಹುಕ್ಕೇರಿ ತಾಲ್ಲೂಕು, ಬೆಳಗಾಂ ಜಿಲ್ಲೆ ಈ ಕಾರ್ಖಾನೆಯು ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಇಂದ 5500 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 256 ಎಸ್‌ಜಿಎಫ್ 09, ಬೆಂಗಳೂರು, ದಿನಾಂಕ: 27.01.2010.**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ "ಮೆ॥ ವಿಶ್ವನಾಥ್ ಶುಗರ್ಸ್ (ಲಿ)" ಬೆಲ್ಲದಬಾಗೇವಾಡಿ, ಹುಕ್ಕೇರಿ ತಾಲ್ಲೂಕು, ಬೆಳಗಾಂ ಜಿಲ್ಲೆ ಈ ಸಕ್ಕರೆ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಇಂದ 5500 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು, ಕಾರ್ಖಾನೆಗೆ ಹೆಚ್ಚುವರಿಯಾಗಿ ಬೇಕಾಗುವ ಕಬ್ಬನ್ನು ಕಾರ್ಖಾನೆಗೆ ಹಂಚಿಕೆಯಾಗಿರುವ ಕಬ್ಬಿನ ಮೀಸಲು ಪ್ರದೇಶಗಳನ್ನು ಅಭಿವೃದ್ಧಿಪಡಿಸಿಕೊಳ್ಳುವ ಮೂಲಕ ಪಡೆದುಕೊಳ್ಳಬೇಕೆಂದು, ಹಾಗೂ ಹೆಚ್ಚುವರಿ ಕಬ್ಬಿನ ಮೀಸಲು ಕ್ಷೇತ್ರಗಳನ್ನು ಹಂಚಿಕೆ ಮಾಡಲು ಬೇಡಿಕೆ ಸಲ್ಲಿಸಬಾರದೆಂಬ ಷರತ್ತನ್ನು ವಿಧಿಸಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 295

**(ಪಿ. ಆನಂದಕುಮಾರ್)**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## INFRASTRUCTURE DEVELOPMENT SECRETARIAT

**Sub :** Upgradation of Byndoor railway halt station.

**Read:**
1. Proceedings of Government of Karnataka dt. 7.10.08.
2. Letter No. KR/W 11-2A dated 21.10.08 of C.E. KRCL.
3. Govt letter No. IDD 34 NSW 08 dt. 12.09.09.
4. Letter No. KR/W/6/32 dt. 08/01/10 KRCL

**Preamble:**

In the Government Order read at No. (1) to above, Government of Karnataka has decided that (a) To take up the work of the construction of Byndoor Station through KRCL (b) To release the funds to KRCL Ltd through K-RIDE (c) To get the approval of K-RIDE for the designs and estimate (d) KRCL to ensure public sensibility while designing the station architecture (e) KRCL to submit a detailed proposal to the State Govt. for release of the amount required for construction of a full fledged Railway station building at Byndoor halt station on deposit term basis by Government of Karnataka.

2. In letter read at (2) above, KRCL has said that the construction of a full fledged railway station will be taken up on "Deposit Term Basis" if the entire cost of Rs. 9.0 crores is borne by the State Government.

3. In the letter read at (3) above, Government of Karnataka reiterated its initial commitment of Rs. 2.10 cr only for construction of full fledged Railway station building at Byndoor halt station and to take up the work on "Deposit Term" basis.

4. The Chief Engineer, KRCL in his letter read at (3) above has requested to deposit the amount of Rs. 2.10 crore for construction of station building at Byndoor and State Government has to bear variation in cost due to passage of time.

5. The proposal of KRCL has been examined and it has been decided to release an amount of Rs. 2.10 crore out of the Budget of Rs. 9.00 crore provided under the Head of Account "5465-01-190-3-02" (Plan) 211 investment towards Hassan Mangalore gauge conversion project during 2009-10. Hence this order.

**Government Order No. IDD 34 NSW 2008, Bangalore, Dated 28th January 2010**

After cafeful examination of the request of Railways, Government is pleased to release an amount of ***Rs. 2.10 crore (Two crore Ten lakhs only)*** towards the construction of station building at Byndoor railway station.

2. The expenditure shall be met under the Head of Account "5465-01-190-3-02" (Plan) 211 investment out of the budget provision Rs. 9.00 crore. Towards Hassan-Mangalore GC projects during 2009-10.

3. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same in the form of DD in favour of FA & CAO/KRCL payable at Belapur), to KRCL.

4. This Order is issued in accordance with the delegation of powers to Principal Secretaries to Govt. vide G.O. No. FD 1 TFP 2008, dt. 16.05.2008.

By Order and in the name of the Governor of Karnataka,
**(N. MANJULA GEETHA)**
Under Secretary to Government,
Infrastructure Development Department

PR. 296

## ಸಹಕಾರ ಸಚಿವಾಲಯ

**ವಿಷಯ :** ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕ್ ನಿ., ಬಿಜಾಪುರ ಇದರ ಆಡಳಿತಗಾರರ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಸಹಕಾರ ಸಂಘಗಳ ನಿಬಂಧಕರ ಆದೇಶ ಸಂಖ್ಯೆ ಯುಬಿಸಿ–1/117/ಎಸ್ಎಸ್ಎನ್/2006–07, ದಿನಾಂಕ 23.01.2007.

2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ ಯುಬಿಸಿ–1/117/ಎಸ್ಎಸ್ಎನ್/2006–07, ದಿನಾಂಕ 10.12.2009.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಸಹಕಾರ ಸಂಘಗಳ ನಿಬಂಧಕರು ದಿನಾಂಕ 23.01.2007ರಂದು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30(1)ರಡಿ ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕ್ ನಿ., ವಿಜಾಪುರ ಇದರ

ಆಡಳಿತ ಸಮಿತಿಯನ್ನು ರದ್ದುಗೊಳಿಸಿ ಆಡಳಿತಗಾರರನ್ನು ನೇಮಿಸಿದ್ದಾರೆ. ತದನಂತರ ಆಡಳಿತಗಾರರ ಅವಧಿಯನ್ನು ದಿನಾಂಕ 23.01.2010ರವರೆಗೆ ವಿಸ್ತರಿಸಲಾಗಿದ್ದು ಆಡಳಿತಗಾರರ ಅವಧಿಯಲ್ಲಿ ಬ್ಯಾಂಕು ಗಮನಾರ್ಹ ಪ್ರಗತಿ ಹೊಂದಿ ಅನುತ್ಪಾದಕ ಆಸ್ತಿ ಪ್ರಮಾಣವನ್ನು ಶೇಕಡಾ 10ಕ್ಕಿಂತ ಕಡಿಮೆ ತರಲು ಆಡಳಿತಗಾರರು 3721 ಪ್ರಕರಣಗಳ ರೂ. 3168.83 ಲಕ್ಷಗಳ ಸಾಲ ವಸೂಲಿಗೆ ವಿವಿಧ ರೀತಿಯ ಕಾನೂನು ಕ್ರಮ ಕೈಗೊಂಡಿದ್ದು, ಬ್ಯಾಂಕಿನ 27,680 ಮಂದಿ 'ಅ' ವರ್ಗದ ಸದಸ್ಯರಿಗೆ ಗುರುತಿನ ಚೀಟಿ ವಿತರಿಸುವ ಪ್ರಕ್ರಿಯೆ ಪ್ರಾರಂಭಿಸಿ ಇದುವರೆಗೆ 18,120 ಮಂದಿಗೆ ಗುರುತಿನ ಚೀಟಿ ವಿತರಿಸಿದ್ದು ಇನ್ನೂ 9,740 ಮಂದಿಗೆ ಗುರುತಿನ ಚೀಟಿ ವಿತರಿಸಬೇಕಾಗಿದ್ದು ಪ್ರಸ್ತುತ ಬ್ಯಾಂಕಿನ ಆಡಳಿತಗಾರರು ಬದಲಾವಣೆಗೊಂಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಬ್ಯಾಂಕಿನ ಆಡಳಿತಗಾರರ ಅವಧಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ದಿನಾಂಕ 24.01.2010ರಿಂದ ದಿನಾಂಕ 23.07.2010 ಆರು ತಿಂಗಳವರೆಗೆ ವಿಸ್ತರಿಸಬಹುದೆಂದು ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಶಿಫಾರಸು ಮಾಡಿರುತ್ತಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಓ 133 ಸಿಎಲ್ಎಂ 2008, ಬೆಂಗಳೂರು, ದಿನಾಂಕ: 23.01.2010.**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕ್ ನಿ., ವಿಜಾಪುರ ಇದರ ಆಡಳಿತಗಾರರ ಅವಧಿಯನ್ನು ದಿನಾಂಕ 24.1.2010 ರಿಂದ 23.7.2010 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಶ್ರೀ ಸಿದ್ದೇಶ್ವರ ಸಹಕಾರಿ ಬ್ಯಾಂಕ್ ನಿ., ವಿಜಾಪುರ ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸಿಸುತ್ತದೆ, ಎಂದರೆ:–

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30 ಉಪಪ್ರಕರಣ (1)ರಲ್ಲಿನ "ಒಂದು ವರ್ಷ" ಎಂಬ ಪದಗಳಿಗೆ ಬದಲಾಗಿ "ಮೂವತ್ತಾರು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಸೂಚನೆ: ಪ್ರಕರಣ 30 ಉಪ–ಪ್ರಕರಣ (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 23.07.2010 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 30 ಉಪ–ಪ್ರಕರಣ(1)ರಲ್ಲಿನ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 297

**(ಆರ್.ಎಸ್. ಹುಚ್ಚಾಚಾರಿ)**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಡಾ॥ ಇಫ್ತಿಕಾರ್ ಅಹ್ಮದ್, ಸಹಕಾರ ಸಂಘಗಳ ಉಪ ನಿಬಂಧಕರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ ಸಇ 224 ಎಸಸೇ 2007, ದಿನಾಂಕ 13.08.2007.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ ಸಿಬ್ಬಂದಿ/200/ಇಜಿಪಿ/2007–08, ದಿನಾಂಕ 23.02.2008.
3. ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್ ಜಿಲ್ಲೆ, ಇವರ ಪತ್ರ ಸಂಖ್ಯೆ ಉನಿಬಿ/ವಿ1/ಆಡಳಿತ/2007–08, ದಿನಾಂಕ 12–06–2009.
4. ಕಾರಣ ಕೇಳುವ ನೋಟೀಸ್ ದಿನಾಂಕ 30–06–2009.

**ಪ್ರಸ್ತಾವನೆ :**

ಡಾ॥ ಇಫ್ತಿಕಾರ್ ಅಹ್ಮದ್, ಸಹಕಾರ ಸಂಘಗಳ ಉಪ ನಿಬಂಧಕರು, ಇವರು ಭದ್ರಾ ಸಹಕಾರ ಸಕ್ಕರೆ ಕಾರ್ಖಾನೆ ನಿಯಮಿತ, ದೊಡ್ಡಬಾತಿ ಹುದ್ದೆಯ ಪ್ರಭಾರವನ್ನು ದಿನಾಂಕ 04–07–2007 ರಂದು ಮತ್ತೊಬ್ಬ ಅಧಿಕಾರಿಗೆ ವಹಿಸಿಕೊಟ್ಟು, ಸ್ಥಳ ನಿಯುಕ್ತಿ ನಿರೀಕ್ಷಣೆಯಲ್ಲಿದ್ದು, ಸದರಿ ಅಧಿಕಾರಿಗೆ ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆಯನ್ವಯ ಕಾರ್ಯದರ್ಶಿ, ಮಹಾತ್ಮಗಾಂಧಿ, ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಭಾಲ್ಕಿ, ಬೀದರ್ ಜಿಲ್ಲೆ ಇಲ್ಲಿಗೆ ವರ್ಗಾಯಿಸಲಾಗಿತ್ತು.

ಮೇಲೆ ಓದಲಾದ (2)ರಲ್ಲಿ ಸಹಕಾರ ಸಂಘಗಳ ನಿಬಂಧಕರು ಡಾ॥ ಇಫ್ತಿಕಾರ್ ಅಹ್ಮದ್, ಸಹಕಾರ ಸಂಘಗಳ ನಿಬಂಧಕರು ಸ್ಥಳ ನಿಯುಕ್ತಿಗೊಂಡ ಕಾರ್ಯದರ್ಶಿ, ಮಹಾತ್ಮಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಭಾಲ್ಕಿ, ಬೀದರ್ ಜಿಲ್ಲೆ ಈ ಹುದ್ದೆಯ ಪ್ರಭಾರವನ್ನು ವಹಿಸಿಕೊಂಡಿಲ್ಲವೆಂಬ ವಿಷಯವನ್ನು ಸರ್ಕಾರದ ಗಮನಕ್ಕೆ ತಂದಿರುತ್ತಾರೆ.

ಅಂತೆಯೇ, ಮೇಲೆ ಓದಲಾದ (3)ರಲ್ಲಿ ಡಾ॥ ಇಫ್ತಿಕಾರ್ ಅಹ್ಮದ್, ಸಹಕಾರ ಸಂಘಗಳ ಉಪ ನಿಬಂಧಕರು, ತಮ್ಮನ್ನು ಸ್ಥಳ ನಿಯುಕ್ತಿಗೊಳಿಸಿದ ಹುದ್ದೆಗೆ ಇನ್ನೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್ ಜಿಲ್ಲೆ, ಬೀದರ್ ರವರು ತಿಳಿಸಿರುತ್ತಾರೆ.

ಅಧಿಕಾರಿಯು ಸ್ಥಳನಿಯುಕ್ತಿಗೊಳಿಸಿದ ಹುದ್ದೆಯ ಕರ್ತವ್ಯಕ್ಕೆ ಹಾಜರಾಗದೇ, ಇದುವರೆಗೆ ಅನಧಿಕೃತವಾಗಿ ಗೈರು ಹಾಜರಾಗಿರುವ ಪ್ರಯುಕ್ತ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರನ್ವಯ ಇವರ ವಿರುದ್ಧ ಇಲಾಖಾ ವಿಚಾರಣೆ ಏಕೆ ಪ್ರಾರಂಭಿಸಬಾರದೆಂಬ ಬಗ್ಗೆ ಡಾ॥ ಇಫ್ತಿಕಾರ್ ಅಹ್ಮದ್, ಸಹಕಾರ ಸಂಘಗಳ ಉಪ ನಿಬಂಧಕರು ರವರಿಗೆ ಮೇಲೆ ಓದಲಾದ (4)ರಲ್ಲಿ ಕಾರಣ ಕೇಳುವ ನೋಟೀಸಿನ ಮೂಲಕ ದೋಷಾರೋಪಣಾ ಪಟ್ಟಿ ಜಾರಿ ಮಾಡಲಾಗಿದ್ದು, ಅಧಿಕಾರಿಯಿಂದ ಈವರೆಗೆ ಯಾವುದೇ ಉತ್ತರ ಸ್ವೀಕೃತವಾಗಿರುವುದಿಲ್ಲ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ನಂತರ, ಡಾ॥ ಇಫ್ತಿಕಾರ್ ಅಹ್ಮದ್, ಸಹಕಾರ ಸಂಘಗಳ ಉಪ ನಿಬಂಧಕರು ಸುಮಾರು ಎರಡು ವರ್ಷಗಳಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದರಿಂದ, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಈ ಆದೇಶವನ್ನು ಹೊರಡಿಸಿದೆ. ಮೇಲೆ ಓದಲಾದ (3)ರಲ್ಲಿ ಪ್ರಧಾನ ಕಾರ್ಯದರ್ಶಿ, ಸಹಕಾರ ಇಲಾಖೆ ಇವರು ಒಪ್ಪಿ ಮೇಲ್ಮನವಿದಾರರ ಮನವಿಯನ್ನು ಮಾನವೀಯ ದೃಷ್ಟಿಯಿಂದ ಪರಿಗಣಿಸಿ, ಸಹಕಾರ ಸಂಘಗಳ ನಿಬಂಧಕರು ದಿನಾಂಕ 4-11-2008ರಲ್ಲಿ ವಿಧಿಸಿರುವ ದಂಡನೆಯನ್ನು ರದ್ದುಪಡಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 132 ಎಸಸೇ 2008, ಬೆಂಗಳೂರು, ದಿನಾಂಕ: 25.01.2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10ರನ್ವಯ ಡಾ॥ ಇಫ್ತಿಕಾರ್ ಅಹ್ಮದ್, ಸಹಕಾರ ಸಂಘಗಳ ಉಪ ನಿಬಂಧಕರು ಇವರು ಸುಮಾರು ಎರಡು ವರ್ಷಗಳಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವ ಹಿನ್ನೆಲೆಯಲ್ಲಿ, ಸದರಿ ಅಧಿಕಾರಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇಲಾಖಾ ವಿಚಾರಣೆ ಕಾಯ್ದಿರಿಸಿ, ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಡಾ॥ ಇಫ್ತಿಕಾರ್ ಅಹ್ಮದ್ ಸಹಕಾರ ಸಂಘಗಳ ಉಪ ನಿಬಂಧಕರು ರವರು ನಿಯಮಾನುಸಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ಸದರಿ ಅಧಿಕಾರಿಗಳು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 298

**(ನಂಜುಂಡಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** 2009-10 ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಹಮ್ಮಿಕೊಂಡಿರುವಂತೆ ಉತ್ಖನನವನ್ನು ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರ ಪತ್ರ ಸಂಖ್ಯೆ ಡಿಎಎಂ:ಎಸಿಟಿ.1:46:2009-10 ದಿನಾಂಕ 19-12-2009.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 19.12.2009ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಇವರು ಪ್ರಸ್ತಾವನೆ ಸಲ್ಲಿಸಿ, 2009-10ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಹಮ್ಮಿಕೊಂಡಿರುವಂತೆ ತಲಕಾಡು, ಹಂಪಿ, ಇಕ್ಕೇರಿಕೋಟೆ ಹಾಗೂ ದೊಡ್ಡಆಲತ್ತೂರು ಐತಿಹಾಸಿಕ ನಿವೇಶನಗಳ ಉತ್ಖನನವನ್ನು ರೂ. 7.00 ಲಕ್ಷದಲ್ಲಿ ಕೈಗೊಳ್ಳಲು

ಪ್ರಸ್ತಾಪಿಸಿರುತ್ತಾರೆ. ಅಲ್ಲದೆ, ಸದರಿ ವೆಚ್ಚವನ್ನು ಲೆಕ್ಕಶೀರ್ಷಿಕೆ 2205–00–103–0–01 (ಯೋಜನೇತರ) 059 ಇತರೆ ಖರ್ಚುಗಳಡಿಯಲ್ಲಿ ಭರಿಸಲು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 246 ಕೆಎಂಯು 2009 ಬೆಂಗಳೂರು, ದಿನಾಂಕ: 22.01.2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2009–10ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಹಮ್ಮಿಕೊಂಡಿರುವಂತೆ ತಲಕಾಡು, ಹಂಪಿ, ಇಕ್ಕೇರಿಕೋಟೆ ಹಾಗೂ ದೊಡ್ಡಆಲತ್ತೂರು ಐತಿಹಾಸಿಕ ನಿವೇಶನಗಳ ಉತ್ಖನನವನ್ನು ರೂ. 7.00 ಲಕ್ಷದಲ್ಲಿ ಕೈಗೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಮೊತ್ತವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೇತರ) 059 ಇತರೆ ಖರ್ಚುಗಳಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಇವರ ಟಿಪ್ಪಣಿ ಸಂಖ್ಯೆ ಶಿಇ 3364 ಐಎಫ್ (ಬಿ&ಎ) 2010, ದಿನಾಂಕ 04–01–2010 ರಲ್ಲಿ ಸಹಮತಿಯನ್ನು ಪಡೆದು ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.7.96 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ.ಕೆ. ಭರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್. 299

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಕಸಂವಾಪ್ರ 91 ಕೆಎಂಯು 2009 ಬೆಂಗಳೂರು, ದಿನಾಂಕ: 25ನೇ ಜನವರಿ, 2010**

ಸರ್ಕಾರದ ಸಮಸಂಖ್ಯೆಯ ದಿನಾಂಕ: 31.10.2009ರ ಆದೇಶದಲ್ಲಿ, ವಿಳಾಸ ಭಾಗದ ಕ್ರಮ ಸಂಖ್ಯೆ: 5ರಲ್ಲಿ ಸಮಿತಿಯ ಎಲ್ಲಾ ಸದಸ್ಯರುಗಳಿಗೆ (ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರ ಮುಖಾಂತರ) ಎಂದಿರುವುದನ್ನು ಸಮಿತಿಯ ಎಲ್ಲಾ ಸದಸ್ಯರುಗಳಿಗೆ (ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರ ಮುಖಾಂತರ) ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ.ಕೆ. ಭರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್. 300

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** 2009–10ನೇ ಸಾಲಿನಲ್ಲಿ ಶ್ರೀ ಕೃಷ್ಣದೇವರಾಯರ 500ನೇ ಪೀಠಾರೋಹಣದ ಸ್ಮರಣಾರ್ಥ ಅಂತಾರಾಷ್ಟ್ರೀಯ ಮಟ್ಟದ ವಿಚಾರ ಸಂಕಿರಣವನ್ನು ಏರ್ಪಡಿಸುವ ಕುರಿತು.

**ಓದಲಾಗಿದೆ :** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರ ಪತ್ರ ಸಂಖ್ಯೆ: ಡಿಎಎಂ:ಎಸಿಟಿ.1.29/2009–10 ದಿನಾಂಕ 07–01–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ: 07–01–2010ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಇವರು ಪ್ರಸ್ತಾವನೆ ಸಲ್ಲಿಸಿ, ಶ್ರೀ ಕೃಷ್ಣದೇವರಾಯರ 500ನೇ ಪೀಠಾರೋಹಣದ ಸ್ಮರಣಾರ್ಥ ಅಂತಾರಾಷ್ಟ್ರೀಯ

ಮಟ್ಟದ ವಿಚಾರ ಸಂಕಿರಣವನ್ನು ಏರ್ಪಡಿಸಲು 2009–10ನೇ ಸಾಲಿನಲ್ಲಿ ರೂ. 5.00 ಲಕ್ಷಗಳ ಅನುದಾನವನ್ನು ಒದಗಿಸಿದ್ದು ಕ್ರಿಯಾ ಯೋಜನೆಯಲ್ಲಿ ಹಮ್ಮಿಕೊಂಡಿರುವಂತೆ ವಿಚಾರ ಸಂಕಿರಣಗಳನ್ನು ಏರ್ಪಡಿಸಲು ಹಣ ಬಿಡುಗಡೆ ಮಾಡುವಂತೆ ಪ್ರಸ್ತಾಪಿಸಿರುತ್ತಾರೆ. ಅಲ್ಲದೆ, ಪ್ರಸಕ್ತ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2205–00–102–4–31–059 (ಯೋಜನೆ) ಅಡಿಯಲ್ಲಿ ರೂ. 15.00 ಲಕ್ಷಗಳನ್ನು ಈಗಾಗಲೇ ಬಿಡುಗಡೆ ಮಾಡಿ ಆದೇಶಿಸಿದೆ. ಅಲ್ಲದೇ ಆಯಾ ಇಲಾಖೆಯ ವಾರ್ಷಿಕ ಆಯವ್ಯಯದಲ್ಲಿ ಹಂಚಿಕೆ ಮಾಡಿರುವ ರೂ. 5.00 ಲಕ್ಷಗಳನ್ನು ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 059 ಇತರೆ ಖರ್ಚು ಅಡಿಯಲ್ಲಿ ಮಂಜೂರು ಮಾಡಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 12 ಕೆಎಂಯು 2010, ಬೆಂಗಳೂರು, ದಿನಾಂಕ 25ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2009–10ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಹಮ್ಮಿಕೊಂಡಿರುವಂತೆ ಶ್ರೀ ಕೃಷ್ಣದೇವರಾಯರ 500ನೇ ಪೀಠಾರೋಹಣದ ಸ್ಮರಣಾರ್ಥ ಅಂತಾರಾಷ್ಟ್ರೀಯ ಮಟ್ಟದ ವಿಚಾರ ಸಂಕಿರಣವನ್ನು ಏರ್ಪಡಿಸಲು ರೂ. 5.00 ಲಕ್ಷಗಳ (ರೂ. ಐದು ಲಕ್ಷಗಳು ಮಾತ್ರ) ಗಳನ್ನು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಇಲಾಖೆ, ಮೈಸೂರು ಇವರಿಗೆ ಬಿಡುಗಡೆ ಮಾಡಿ ಆದೇಶಿಸಿದೆ.

ಈ ಮೊತ್ತವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 059 ಇತರೆ ಖರ್ಚುಗಳಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10–07–96ರಲ್ಲಿ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎಂ.ಕೆ. ಧರ್ಮರಾಜಪ್ಪ)**

ಪಿ.ಆರ್. 301

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.
(ಆಡಳಿತ ಕನ್ನಡ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಗುಲ್ಬರ್ಗಾ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ತಜ್ಞರ ಸಮಿತಿಯನ್ನು ಪುನರ್‌ರಚಿಸಿ, ಮುಂದುವರಿಸುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 127 ಕೆಎಂಯು 2004 ದಿನಾಂಕ: 9–12–2005.
2. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 145 ಕೆಎಂಯು 2007, ದಿನಾಂಕ: 04–06–2008.
3. ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆರವರ ಪತ್ರ ಸಂಖ್ಯೆ: ಅಪ್ರಾಸಂಪ/ಗು.ತ.ಸ./2009–10/148, ದಿನಾಂಕ: 28–07–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರದ ಆದೇಶದಲ್ಲಿ ಗುಲ್ಬರ್ಗಾ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ತಜ್ಞರ ಸಮಿತಿಯನ್ನು ದಿನಾಂಕ 9–12–2005 ರಿಂದ ಒಂದು ವರ್ಷದ ಅವಧಿಗೆ ರಚಿಸಲಾಗಿತ್ತು. ಸದರಿ ಸಮಿತಿಯನ್ನು ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ದಿನಾಂಕ: 09–12–2006 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿ ಆದೇಶಿಸಿದೆ. ಇದರ ಕಾಲಮಿತಿಯು 08–12–2008ಕ್ಕೆ ಮುಕ್ತಾಯಗೊಂಡಿದೆ. ಮೇಲೆ ಓದಲಾದ (3)ರ ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರು 18 ಸದಸ್ಯರ ಪಟ್ಟಿಯನ್ನು ಅವರ ವಿಳಾಸಗಳೊಂದಿಗೆ ಸಲ್ಲಿಸಿ, ತಜ್ಞರ ಸಮಿತಿಯನ್ನು ಎರಡು ವರ್ಷದ ಅವಧಿಯವರೆಗೆ ಪುನರ್‌ರಚಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 21 ಕೆಎಂಯು 2009, ಬೆಂಗಳೂರು, ದಿನಾಂಕ 23ನೇ ಜನವರಿ 2010.**

ಗುಲ್ಬರ್ಗಾ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ಈ ಕೆಳಕಂಡ 18 ಸದಸ್ಯರುಗಳ ತಜ್ಞರ ಸಮಿತಿಯನ್ನು ಎರಡು ವರ್ಷಗಳ ಅವಧಿಗೆ ರಚಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿ/ಅಧಿಕಾರೇತರ ಹೆಸರು | |
|---|---|---|
| 1 | ಜಿಲ್ಲಾಧಿಕಾರಿಯವರು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ | ಅಧ್ಯಕ್ಷರು |
| 2 | ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು, ಗುಲ್ಬರ್ಗಾ | ಸದಸ್ಯರು |
| 3 | ಆಯುಕ್ತರು, ಮಹಾನಗರ ಪಾಲಿಕೆ ಗುಲ್ಬರ್ಗಾ | ಸದಸ್ಯರು |

| | | |
|---|---|---|
| 4 | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು, ಜಿಲ್ಲಾ ಪಂಚಾಯತ್, ಗುಲ್ಬರ್ಗಾ. | ಸದಸ್ಯರು |
| 5 | ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆಯ ಆಯುಕ್ತರ ಪ್ರತಿನಿಧಿ, ಬೆಂಗಳೂರು | ಸದಸ್ಯರು |
| 6 | ಡಾ: ಬಿ.ಸಿ. ಮಹಬಳೇಶ್ವರಪ್ಪ, ಇತಿಹಾಸ ತಜ್ಞರು, ಇತಿಹಾಸ ವಿಭಾಗದ ಮುಖ್ಯಸ್ಥರು, ಗುಲ್ಬರ್ಗಾ ವಿಶ್ವ ವಿದ್ಯಾಲಯ ಗುಲ್ಬರ್ಗಾ | ಸದಸ್ಯರು |
| 7 | ಸಹಾಯಕ ಸಂರಕ್ಷಣಾಧಿಕಾರಿಗಳು, ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ ನಂ30, ಮನಸಬ್ದಾರ್ ಲೇಔಟ್, ಸಂತ್ರಾಸವಾಡಿ, ಗುಲ್ಬರ್ಗಾ | ಸದಸ್ಯರು |
| 8 | ಪರಿಸರ ಅಧಿಕಾರಿಗಳು, ಪರಿಸರ ತಜ್ಞರು, ಕರ್ನಾಟಕ ಸರ್ಕಾರ ಐವಾನ–ಎ–ಶಾಹಿ ರಸ್ತೆ, ಗುಲ್ಬರ್ಗಾ | ಸದಸ್ಯರು |
| 9 | ಶ್ರೀ ಭರತ್ ಭೂಷಣ್, ಆಕೃತಿ ಆರ್ಕಿಟೆಕ್ಚರಲ್ ಕನ್ಸಲ್ಟೆಂಟ್ಸ್, ವಾಸ್ತು ಶಿಲ್ಪಿ ಸಂರಕ್ಷಕರು, ನಂ. 1–12–3 'ಬಸವ ನಿವಾಸ' 1ನೇ ಮಹಡಿ, ಸ್ಟೇಷನ್ ಮುಖ್ಯ ರಸ್ತೆ, ಗುಲ್ಬರ್ಗಾ | ಸದಸ್ಯರು |
| 10 | ಶ್ರೀಮತಿ ಜ್ಯೋತಿ ಆರ್. ಪಾಟೀಲ, ವಾಸ್ತುಶಿಲ್ಪ ರಚನೆಕಾರರು, ಪಿ.ಡಿ.ಎ. ಇಂಜಿನಿಯರಿಂಗ್ ಕಾಲೇಜು, ವಾಸ್ತು ಶಿಲ್ಪ ವಿಭಾಗ, ಗುಲ್ಬರ್ಗಾ | ಸದಸ್ಯರು |
| 11 | ನಗರ ಯೋಜನಾಧಿಕಾರಿ, ನಗರ ವಿನ್ಯಾಸ ತಜ್ಞರು, ಗುಲ್ಬರ್ಗಾ | ಸದಸ್ಯರು |
| 12 | ಸಹಾಯಕ ಅಭಿಯಂತರರು, ನಗರ ವಿನ್ಯಾಸ ತಜ್ಞರು, ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರ, ಗುಲ್ಬರ್ಗಾ | ಸದಸ್ಯರು |
| 13 | ಉಪ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಗುಲ್ಬರ್ಗಾ ವಿಭಾಗ, ಕಮಲಾಪುರ, ಹೊಸಪೇಟೆ, ಬಳ್ಳಾರಿ ಜಿಲ್ಲೆ. | ಸದಸ್ಯರು |
| 14 | ಶ್ರೀ ಬಸವರಾಜ ಪಾಟೀಲ, C/o ಶ್ರೀ ಎಸ್.ಬಿ. ಪಾಟೀಲ, ಹಿರಿಯ ನಾಗರೀಕರು, ಉದ್ದಿಮೆದಾರರು, ನೆಹರುಗಂಜ್, ಗುಲ್ಬರ್ಗಾ | ಸದಸ್ಯರು |
| 15 | ಶ್ರೀ ಎಂ.ಎ. ಅಜೀಮ್, ಹಿರಿಯ ನಾಗರೀಕರು, ಷಾಬಾಜ್ ಎಜುಕೇಷನ್ ಇನ್ಸ್ಟಿಟ್ಯೂಟ್ ನೆಹರುಗಂಜ್, ಗುಲ್ಬರ್ಗಾ. | ಸದಸ್ಯರು |
| 16 | ಶ್ರೀ ಮ.ಗು. ಬಿರಾದಾರ, ಹಿರಿಯ ನಾಗರೀಕರು, ಸಾಹಿತಿಗಳು ಗುಲ್ಬರ್ಗಾ. | ಸದಸ್ಯರು |
| 17 | ಶ್ರೀ ವಿ.ಜಿ. ಅಂದಾನಿ, ಚಿತ್ರಕಲಾವಿದರು, ಐಡಿಯಲ್ ಫೈನ್ ಆರ್ಟ್ ಕಾಲೇಜು, ಗುಲ್ಬರ್ಗಾ | ಸದಸ್ಯರು |
| 18 | ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ ಗುಲ್ಬರ್ಗಾ. | ಸದಸ್ಯ – ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 302

**(ಎಂ.ಕೆ. ಭರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು
ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಆಡಳಿತ ಕನ್ನಡ ಕಾರ್ಯ ಶಿಬಿರಗಳ ಅನುಷ್ಠಾನಕ್ಕಾಗಿ ಜಿಲ್ಲಾ ಮಟ್ಟದ ಹಾಗೂ ತಾಲ್ಲೂಕು ಮಟ್ಟದ ಸಮಿತಿಗಳನ್ನು ರಚಿಸುವ ಬಗ್ಗೆ.

**ಓದಲಾಗಿದೆ** : 1. ದಿನಾಂಕ: 1–10–2009 ರಂದು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸಹಯೋಗದಲ್ಲಿ ನಡೆದ ಆಡಳಿತ ಕನ್ನಡ ಉನ್ನತ ಸಲಹಾ ಸಮಿತಿ ಸಭೆಯ ನಡವಳಿಗಳು

2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರ ಪತ್ರ ಸಂಖ್ಯೆ: ಕಸನಿ/31/ಕ.ಅ/2009–10 ದಿನಾಂಕ: 14–10–2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 01–10–2009ರ ಆಡಳಿತ ಕನ್ನಡ ಉನ್ನತ ಸಲಹಾ ಸಮಿತಿ ಸಭೆಯಲ್ಲಿ ರಾಜ್ಯ ಸರ್ಕಾರದ ಎಲ್ಲಾ ಅಧಿಕಾರಿ ಹಾಗೂ ನೌಕರರಿಗೆ ಆಡಳಿತ ಕನ್ನಡ ತರಬೇತಿ ನೀಡಲು ಆಡಳಿತ ಕನ್ನಡ ಕಾರ್ಯಶಿಬಿರಗಳನ್ನು ಏರ್ಪಡಿಸಲು ತೀರ್ಮಾನಿಸಲಾಗಿದ್ದು ರಾಜ್ಯಾದ್ಯಂತ ಏರ್ಪಡಿಸಲಾಗುವ ಈ ಆಡಳಿತ ಕನ್ನಡ ಕಾರ್ಯಶಿಬಿರಗಳ ಸಮರ್ಥ ಸಂಘಟನೆ ಹಾಗೂ ಯಶಸ್ವಿ ಅನುಷ್ಠಾನಕ್ಕಾಗಿ ಈ ಕೆಳಕಂಡಂತೆ ಜಿಲ್ಲಾ ಮಟ್ಟದಲ್ಲಿ ಹಾಗೂ ತಾಲ್ಲೂಕು ಮಟ್ಟದಲ್ಲಿ ಸಮನ್ವಯ ಸಮಿತಿಯನ್ನು ರಚಿಸಲು ತೀರ್ಮಾನಿಸಲಾಯಿತು.

**ಜಿಲ್ಲಾಮಟ್ಟದ ಸಮಿತಿ**

| | | | |
|---|---|---|---|
| 1. | ಜಿಲ್ಲಾಧಿಕಾರಿಗಳು | – | ಅಧ್ಯಕ್ಷರು |
| 2. | ಜಿಲ್ಲಾ ಕಾರ್ಯನಿರ್ವಾಹಣಾಧಿಕಾರಿಗಳು (ಜಿಲ್ಲಾಪಂಚಾಯತ್) | – | ಸದಸ್ಯರು |
| 3. | ಕನ್ನಡ ಅಭಿವೃದ್ಧಿ ಪ್ರಾಧಿಕಾರದ ವಿಭಾಗದ ಸದಸ್ಯರು | – | ಸದಸ್ಯರು |
| 4. | ಜಿಲ್ಲಾ ತರಬೇತಿ ಸಂಸ್ಥೆಯ ಪ್ರಾಂಶುಪಾಲರು | – | ಸದಸ್ಯರು |
| 5. | ಸಹಾಯಕ ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ | – | ಸದಸ್ಯ – ಕಾರ್ಯದರ್ಶಿಗಳು |

**ತಾಲ್ಲೂಕು ಮಟ್ಟದ ಸಮಿತಿ**

| | | | |
|---|---|---|---|
| 1. | ಸಹಾಯಕ ಆಯುಕ್ತರು | – | ಅಧ್ಯಕ್ಷರು |
| 2. | ಕಾರ್ಯನಿರ್ವಾಹಕ ಅಧಿಕಾರಿಗಳು (ತಾಲ್ಲೂಕು ಪಂಚಾಯತ್) | – | ಸದಸ್ಯರು |
| 3. | ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಪ್ರಾದೇಶಿಕ ಸದಸ್ಯರು | – | ಸದಸ್ಯರು |
| 4. | ಜಿಲ್ಲಾ ತರಬೇತಿ ಸಂಸ್ಥೆಯ ಪ್ರಾಂಶುಪಾಲರು | – | ಸದಸ್ಯರು |
| 5. | ತಹಶೀಲ್ದಾರರು | – | ಸದಸ್ಯ – ಕಾರ್ಯದರ್ಶಿಗಳು |

ಮೇಲೆ (2)ರಲ್ಲಿ ಓದಲಾದ ದಿನಾಂಕ: 14–10–2009ರ ಪತ್ರದಲ್ಲಿ ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಆಡಳಿತ ಕನ್ನಡ ಶಿಬಿರಗಳು ಸುಗಮವಾಗಿ ನಡೆಯಲು ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಸಮನ್ವಯ ಸಮಿತಿಯನ್ನು ರಚಿಸಲು ಕೋರಿರುತ್ತಾರೆ ಹಾಗೂ ಈ ತರಬೇತಿಗೆ ಮಾದರಿ ಕಛೇರಿ ಕೈಪಿಡಿ ಹಾಗೂ ಕಾರ್ಯದರ್ಶಿಗಳ ಕಛೇರಿ ಕೈಪಿಡಿಗಳ ಅವಶ್ಯಕತೆಯಿದ್ದು ಅದಕ್ಕಾಗಿ ರೂ. 4.10 ಲಕ್ಷಗಳ ವೆಚ್ಚ ತಗಲುವುದೆಂದು ಅದನ್ನು ಲೆಕ್ಕಶೀರ್ಷಿಕೆ ನಿರ್ದೇಶನ ಮತ್ತು ಆಡಳಿತ 2205–00–001–0–01–059 ರಡಿ ಭರಿಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ, ಕಸಂವಾಪ್ರ 66 ಕೆಓಎಲ್ 2009 (ಭಾಗ–1) ಬೆಂಗಳೂರು, ದಿನಾಂಕ 25ನೇ ಜನವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ರಾಜ್ಯದ ಆಡಳಿತದ ಎಲ್ಲಾ ಹಂತಗಳಲ್ಲಿ ಕನ್ನಡವನ್ನು ಸುಗಮವಾಗಿ ಪರಿಣಾಮಕಾರಿಯಾಗಿ ಬಳಸಲು ಅನುಕೂಲವಾಗುವಂತೆ ಸರ್ಕಾರದ ಅಧಿಕಾರಿಗಳು ಹಾಗೂ ನೌಕರರುಗಳಿಗೆ ಆಡಳಿತ ಕನ್ನಡ ಶಿಬಿರ ಏರ್ಪಡಿಸುವ ಬಗ್ಗೆ ತೀರ್ಮಾನಿಸಲಾಗಿದ್ದು ರಾಜ್ಯಾದ್ಯಂತ ಏರ್ಪಡಿಸಲಾಗುವ ಈ ಆಡಳಿತ ಕನ್ನಡ ಕಾರ್ಯಶಿಬಿರಗಳ ಸಮರ್ಥ ಸಂಘಟನೆ ಹಾಗೂ ಯಶಸ್ವಿ ಅನುಷ್ಠಾನಕ್ಕಾಗಿ ಈ ಕೆಳಕಂಡಂತೆ ಜಿಲ್ಲಾಮಟ್ಟದ ಹಾಗೂ ತಾಲ್ಲೂಕು ಮಟ್ಟದ ಅನುಷ್ಠಾನ ಸಮಿತಿಗಳನ್ನು ರಚಿಸಿ ಆದೇಶಿಸಿದೆ.

**ಜಿಲ್ಲಾಮಟ್ಟದ ಸಮಿತಿ**

| | | | |
|---|---|---|---|
| 1. | ಜಿಲ್ಲಾಧಿಕಾರಿಗಳು | – | ಅಧ್ಯಕ್ಷರು |
| 2. | ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು (ಜಿಲ್ಲಾ ಪಂಚಾಯತ್) | – | ಸದಸ್ಯರು |
| 3. | ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಆಯಾ ವಲಯದ ಸದಸ್ಯರು (ಜಿಲ್ಲಾಧಿಕಾರಿಗಳು Co-opt ಮಾಡಿಕೊಳ್ಳಬಹುದು) | – | ಸದಸ್ಯರು |
| 4. | ಜಿಲ್ಲಾ ತರಬೇತಿ ಸಂಸ್ಥೆಯ ಪ್ರಾಂಶುಪಾಲರು | – | ಸದಸ್ಯರು |
| 5. | ಸಹಾಯಕ ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ | – | ಸದಸ್ಯ–ಕಾರ್ಯದರ್ಶಿಗಳು |

**ತಾಲ್ಲೂಕು ಮಟ್ಟದ ಸಮಿತಿ**

| | | | |
|---|---|---|---|
| 1. | ಉಪವಿಭಾಗಾಧಿಕಾರಿಗಳು | – | ಅಧ್ಯಕ್ಷರು |
| 2. | ಕಾರ್ಯನಿರ್ವಾಹಕ ಅಧಿಕಾರಿಗಳು | – | ಸದಸ್ಯರು |
| 3. | ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸದಸ್ಯರು | – | ಸದಸ್ಯರು |
| 4. | ಸಹಾಯಕ ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ | – | ಸದಸ್ಯ–ಕಾರ್ಯದರ್ಶಿಗಳು |

ಮೇಲ್ಕಂಡ ಅನುಷ್ಠಾನ ಸಮಿತಿಗಳು ಆಯಾ ಜಿಲ್ಲೆ/ತಾಲ್ಲೂಕುಗಳಲ್ಲಿ ಆಡಳಿತ ಕನ್ನಡ ಕಾರ್ಯಶಿಬಿರಗಳನ್ನು ಏರ್ಪಡಿಸುವುದು, ಶಿಬಿರದಲ್ಲಿ ಭಾಗವಹಿಸಬೇಕಾದ ಅಧಿಕಾರಿ/ಸಿಬ್ಬಂದಿಯನ್ನು ಆಯ್ಕೆ ಮಾಡುವುದು, ಶಿಬಿರದ ಮೇಲ್ವಿಚಾರಣೆ ನಡೆಸುವುದು ಹಾಗೂ ಶಿಬಿರ ನಡೆಸಿದ ನಂತರ ಅದರ ಫಲಶೃತಿ ಕುರಿತು ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ ನಿಯಮಿತವಾಗಿ ವರದಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 303

**(ಎಂ.ಕೆ. ಧರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## ಶಿಕ್ಷಣ ಸಚಿವಾಲಯ

**ವಿಷಯ :** ರಾಜ್ಯ ಪಠ್ಯಕ್ರಮದ ಸಮಗ್ರ ಪರಿಷ್ಕರಣೆ ಹಾಗೂ ಪಠ್ಯಪುಸ್ತಕದ ರಚನಾ ಕಾರ್ಯಕ್ರಮಕ್ಕೆ ಸಂಯೋಜಕರನ್ನಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ :** ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ದಿನಾಂಕ: 31–12–2009ರ ಟಿಪ್ಪಣಿ: ಸಂಖ್ಯೆ: ಪ್ರಾ.ಪ್ರೌ.ಶಿ.ಸ./4131/2009.

**ಪ್ರಸ್ತಾವನೆ :**

1. ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಓದಲಾದ ಟಿಪ್ಪಣಿಯಲ್ಲಿ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಎನ್.ಸಿ.ಎಫ್.–2005ರ ಮಾರ್ಗಸೂಚಿಯಂತೆ ರಾಜ್ಯ ಪಠ್ಯಕ್ರಮದ ಸಮಗ್ರ ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನಾ ಕಾರ್ಯಕ್ರಮಗಳು ತುರ್ತಾಗಿ ಆಗಬೇಕಾಗಿದ್ದು, ಈ ಕಾರ್ಯದ ಮೇಲ್ವಿಚಾರಣೆ ಹಾಗೂ ಇಲಾಖೆ ಮತ್ತು ಸರ್ಕಾರದೊಂದಿಗೆ ಸಂಯೋಜನೆ ಮಾಡಲು ಶ್ರೀ ಜಿ.ಎಸ್. ಮುಡಂಬಡಿತ್ತಾಯ, ನಿವೃತ್ತ ಜಂಟಿ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರನ್ನು ಸಂಯೋಜಕರನ್ನಾಗಿ ಪಠ್ಯಪುಸ್ತಕ ರಚನಾ ಕಾರ್ಯ ಮುಗಿಯುವವರೆಗೆ ನೇಮಿಸಿ ಆದೇಶ ಹೊರಡಿಸುವಂತೆ ಆದೇಶಿಸಿರುತ್ತಾರೆ.
2. ಸದರಿ ಪ್ರಸ್ತಾವನೆ ಬಗ್ಗೆ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 15 ಯೋಯೋಕ 2010, ಬೆಂಗಳೂರು, ದಿನಾಂಕ 23ನೇ ಜನವರಿ 2010.**
**(ಇಡಿ: 9 : ಸ್ವೀಮರ (ಯುನಿಕ್) 2010, ದಿನಾಂಕ 23–01–2010)**

3. ಎನ್.ಸಿ.ಎಫ್–2005ರ ಮಾರ್ಗಸೂಚಿಯಂತೆ ರಾಜ್ಯ ಪಠ್ಯಕ್ರಮದ ಸಮಗ್ರ ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನಾ ಕಾರ್ಯದ ಮೇಲ್ವಿಚಾರಣೆ ಮಾಡಲು ಸಂಯೋಜಕರನ್ನಾಗಿ (ಗುತ್ತಿಗೆ ಆಧಾರದ ಮೇಲೆ) 01–02–2010 ರಿಂದ ಆರು ತಿಂಗಳ ಅವಧಿಗೆ ಶ್ರೀ ಜಿ.ಎಸ್. ಮುಡಂಬಡಿತ್ತಾಯ ನಿವೃತ್ತ ಜಂಟಿ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರನ್ನು ನೇಮಕ ಮಾಡಲಾಗಿದೆ.
4. ಸದರಿಯವರಿಗೆ ಮೇಲ್ಕಂಡ ಅವಧಿಗೆ ಮಾಹೆಯಾನ 10,000 ರೂ.ಗಳಂತೆ ಪಠ್ಯಪುಸ್ತಕ ಸಂಘಕ್ಕೆ ಒದಗಿಸಿರುವ ಅನುದಾನದ ಮಿತಿಯೊಳಗೆ ಭರಿಸುವಂತೆ ಸೂಚಿಸಲಾಗಿದೆ.
5. ಸದರಿಯವರಿಗೆ ಸಚಿವಾಲಯ ಸಿಬ್ಬಂದಿ ಮತ್ತು ವಾಹನ ಸೌಲಭ್ಯವನ್ನು ಡಿ.ಎಸ್.ಇ.ಆರ್.ಟಿ. ಕಟ್ಟಡದಲ್ಲಿ ಕರ್ನಾಟಕ ಪಠ್ಯಪುಸ್ತಕ ಸಂಘವು ಒದಗಿಸುವುದು.
6. ಸದರಿಯವರು ನಿರ್ವಹಿಸಬೇಕಾದ ಕಾರ್ಯಗಳನ್ನು ವ್ಯವಸ್ಥಾಪಕ ನಿರ್ದೇಶಕರು, ಪಠ್ಯಪುಸ್ತಕ ಸಂಘ ಇವರು ಗುರುತಿಸಿ ಇವರಿಗೆ ವಹಿಸತಕ್ಕದ್ದು.
7. ಸದರಿಯವರು ತಿಂಗಳಿಗೊಮ್ಮೆ ಪಠ್ಯಪುಸ್ತಕ ರಚನೆ ಬಗ್ಗೆ ಆಗುತ್ತಿರುವ ಪ್ರಗತಿಯನ್ನು ಸರ್ಕಾರಕ್ಕೆ ವರದಿ ಮಾಡುವಂತೆ ಸೂಚಿಸಲಾಗಿದೆ.
8. ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿಇ 97 ಐಎಫ್(ಬಿ ಮತ್ತು ಎ) 2010, ದಿನಾಂಕ 13–01–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 304

**(ಐ.ಎಫ್. ಮಾಗಿ)**
ವಿಶೇಷಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)